# ಸಿದ್ಧಗಂಗಾ

ಸಂಪುಟ–೨೨ ಸಂಚಿಕೆ–೭ ಜುಲೈ ೧೯೮೬

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಬಸವ ಸಂದೇಶವ ಬಿತ್ತುತ ನಡೆದಿರುವೆ
ಹಸನು ಮಾಡುತ ಜನಮನವ । ನನ್ನ ತಂದೆ
ಸಿದ್ಧಗಂಗಾ ಗುರುವೇ ಕೃಪೆಯಾಗು ॥

* * *

ಸೇವೆಯಲಿ ಶಿವಪೂಜೆಕಾತು ಹಣ್ಣಾದಾಗ
ಭಾವದಲಿ ಶಿವಯೋಗ ನಡೆಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ನುಡಿದಂತೆ ನಡೆ ಎಂದೆ ನಡೆದು ನೀನುಡಿಯೆಂದೆ
ಅರಿವಿಡಿದು ಗುರುವಿನ ಶ್ರೀಪಾದ ನೆನೆಯೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು

—ಹೆಚ್.ಎ. ವೀರಭದ್ರಯ್ಯ

# ಸಿದ್ಧಗಂಗಾಂತರಂಗ



# ಶ್ರೀವಾಣಿ

ವ್ಯಕ್ತಿ ಸ್ವಭಾವಃ ಸುಖಾಪೇಕ್ಷಿ. ಸುಖದಲ್ಲಿ ತಾತ್ಕಾಲಿಕ ಸುಖ ಮತ್ತು ಶಾಶ್ವತ ಸುಖವೆಂದು ಎರಡು ಬಗೆ. ತಾತ್ಕಾಲಿಕ ಸುಖ ಸಂತೋಷಗಳು ಕ್ಷಣ ಭಂಗುರ, ಇವು ಅನರ್ಥಕಾರಿ. ವ್ಯಕ್ತಿಯನ್ನು ನಾನಾ ಬಗೆಯಲ್ಲಿ ಪ್ರಚೋದಿಸುತ್ತವೆ. ಕಳವು, ಕೊಲೆ, ಸುಲಿಗೆ, ವಂಚನೆ, ಮೋಸ ಮುಂತಾದ ಕಾರ್ಯಗಳಲ್ಲಿ ತೊಡಗುವಂತೆ ಮಾಡುತ್ತವೆ. ಮನಸ್ಸನ್ನು ದೇಹವನ್ನು ಬಳಲಿಸದ ವ್ಯಕ್ತಿ ಈ ದುರ್ವ್ಯವಹಾರಗಳಿಗೆ ಮನಸ್ಸು ಮಾಡುತ್ತಾನೆ. ಅವನ ಮನೋ ವ್ಯಾಪಾರ ಸತ್ಕ್ರಿಯೆ ಸತ್ಕರ್ಮ ಇತ್ಯಾದಿಗಳಿಂದ ವಂಚಿತವಾಗುತ್ತದೆ. ದುಶ್ಚಟಗಳಿಗೆ ವಶನಾಗಿ ವ್ಯಕ್ತಿತ್ವವನ್ನು ಆಳುಗೆಡವುತ್ತಾನೆ. ಒಂದು ವೇಳೆ ಆತನ ದುರ್ನಡತೆಯಿಂದ ಕ್ಷಣಿಕ ಫಲ ದೊರೆತರೂ ಪರಿಣಾಮ ಮಂಗಳಕರವಾಗಿರುವುದಿಲ್ಲ. ಹಿಂದೆ ಮಾಡಿದ ಕರ್ಮ ಫಲವನ್ನು ಅನುಭವಿಸದೆ ಉಳಿಯುವಂತಿಲ್ಲ. ಒಂದು ಸೂಕ್ತಿ ಹೀಗಿದೆ. "ಅವಶ್ಯಂ ಅನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಶುಭವಾಗಲಿ ಮಾಡಿದ ಕರ್ಮಫಲವನ್ನು ಅವಶ್ಯ ಅನುಭವಿಸಲೇಬೇಕು. "ಮಾಡಿದ್ದುಣ್ಣೋ ಮಹಾರಾಯ" ಎಂಬ ಮಾತು ಇದನ್ನೇ ಸಮರ್ಥಿಸುತ್ತದೆ. ಉಪ್ಪು ತಿಂದವನು ನೀರು ಕುಡಿಯುಬೇಕು. ಈತನ ವಿಷಯ ತೃಪ್ತಿಯ ದಾಹಕ್ಕೆ ಸನಿಹದವರೂ ಕೊಂಚ ಬಳಲುವ ಪ್ರಸಂಗ ಬಂದರೂ ಬರಬಹುದು. ಇದು ಅನಿವಾರ್ಯ. ಕಾರಣ ಸಹವಾಸ ದೋಷ ಇನ್ನು ಶಾಶ್ವತ ಸುಖವೆಂದರೆ ಸಚ್ಚಿದಾನಂದ ಸ್ವರೂಪದ ಅನ್ವೇಷಣೆ. ಪರಮಾತ್ಮನ ಸಾಕ್ಷಾತ್ಕಾರ. ಇದು ಸುಲಭ ಸಾಧ್ಯವೂ ಅಲ್ಲ. ಈ ಜ್ಞಾನಾನಂದದ ರುಚಿ ಕಂಡವರು ಮಾತ್ರ ಈ ದಿಸೆಯಲ್ಲಿ ಸಾಗಬಲ್ಲರು. ಇದು ಎಲ್ಲರಿಗೂ ಸಾಧ್ಯವಿಲ್ಲ. ಗುರು ಕರುಣೆ ಒದಗಿರಬೇಕು ನಿರಂತರ ಸಾಧನೆ ಇರಬೇಕು. ಆಗಲೇ ಶಾಶ್ವತ ಸುಖ.

## "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಟಿ. ಎನ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 20-00 ರೂ
ಆಜೀವ ಸದಸ್ಯತ್ವ 201-00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು".


'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.


ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

**ಕೂಡಲಸಂಗಮ**

ಕೃಷ್ಣಾ ಮಲಪ್ರಭಾ ನದಿಗಳ ಪವಿತ್ರ ಮಿಲನ ಇಂದು ನೆನ್ನೆಯದಲ್ಲ. ಕೂಡಲ ಸಂಗಮ ಕ್ಷೇತ್ರ ಪ್ರಾಚೀನ. ಬಸವಣ್ಣನವರನ್ನು ಟಂಕಿಸಿದ ಕರ್ತಾರನ ಕಮ್ಮಟ. ಕರ್ನಾಟಕದ ಅತ್ಯಂತ ಮಹತ್ವದ ಗುರುಕುಲ, ಶಿಕ್ಷಣಧಾಮ, ಚಾರಿತ್ರಿಕ ಮಹತ್ವ ಅದಕ್ಕೆ. ಬಸವಣ್ಣನವರು ಅಲ್ಲಿಗೆ ಬರುವ ಮೊದಲು ಅಸ್ತಿತ್ವದಲ್ಲಿದ್ದ ಸಾಂಸ್ಕೃತಿಕ ಕೇಂದ್ರ. ಬಸವಣ್ಣನವರಿಂದ ಅದಕ್ಕೊಂದು ನಿತ್ಯ ಶಾಶ್ವತ ಕೀರ್ತಿ. ಜಗತ್ತಿಗೇ ಹೊಸ ತಿರುವನ್ನು ಕೊಟ್ಟ ಯಶಸ್ಸು ಅದರದ್ದು. ವರ್ಗರಹಿತ, ವರ್ಣರಹಿತ ಸಮಾಜ ರಚನೆಯ ಕನಸು ಕಂಡದ್ದು ಬಸವಣ್ಣ ಕೂಡಲಸಂಗಮದಲ್ಲಿಯೇ. ಕಾಯಕದ ಪರಿ ಕಲ್ಪನೆ ಗರಿಮೂಡಿದ್ದು ಅವರಿಗೆ ಅಲ್ಲಿಯೇ. ಬಸವಣ್ಣನವರ ಮೂಲಕ ತನ್ನ ಅಂತ ರಾಳದ ನಿತ್ಯನೂತನ ಮಾನವೀಯ ಮೌಲ್ಯಗಳನ್ನು ಅಭಿವ್ಯಕ್ತಿಸಿಕೊಂಡದ್ದು ಕೂಡಲ ಸಂಗಮ. ತೆರೆದ ಪುಸ್ತಕದಂತೆ, ಉತ್ತ ಹೊಲದಂತೆ ತನ್ನೆಡೆಗೆ ಬಂದ ಎಲ್ಲರಿಗೆ, ಎಲ್ಲ ಸಾಧಕರಿಗೆ ತನ್ನನ್ನು ಒಪ್ಪಿಸಿಕೊಂಡ ಔದಾರ್ಯ ಅದಕ್ಕುಂಟು. ಒಂದು ಮಹಾನ್ ಸಂಸ್ಕೃತಿಯ ವಿರಾಟ್‌ರೂಪವನ್ನು ಮೆರೆದ ಹೆಮ್ಮೆಯ ಕೋಡು ಕೂಡಲಸಂಗಮಕ್ಕೆ. ಬಸವಣ್ಣನವರು ತಮ್ಮ ವಚನಗಳ ಅಂಕಿತವನ್ನಾಗಿ ಕೂಡಲಸಂಗಮದೇವನೆಂದೇ ಇಟ್ಟುಕೊಂಡರು. ಅಷ್ಟೊಂದು ಪ್ರಭಾವ ಅವರದ್ದು, ಅಂಥ ಕ್ಷೇತ್ರದ ಆದಿನಾಥ ಸಂಗಮನಾಥ. ಆದರಿಂದು ಅದರ ಮುಳುಗಡೆ ಜಗತ್ತಿಗೇ ನಿತ್ಯನೂತನ ಮಂತ್ರನೀಡಿದ ಬಸವಣ್ಣನವರನ್ನು ರೂಪಿಸಿದಂಥ, ಕಾಯಕ, ದಾಸೋಹಗಳಂಥ ತತ್ವ ಪ್ರತಿಪಾದನೆಗೆ ತನ್ನೆಲ್ಲ ಜೀವಸತ್ವವನ್ನು ಧಾರೆಯೆರೆದಂಥ ಕೂಡಲಸಂಗಮಕ್ಷೇತ್ರ ಇಂದು ಮುಳುಗು ತ್ತಿದೆ. ಇದಕ್ಕಿಂತ ದುರಂತ ಇನ್ನಾವುದಿದೆ. ಚಾರಿತ್ರಿಕ ಮಹತ್ವ ಗೊತ್ತಿಲ್ಲದ ನಾವು ಎತ್ತ ಸಾಗುತ್ತಿದ್ದೇವೆ. ಇದು ಕೇವಲ ಒಂದು ಧರ್ಮದ, ಜನಾಂಗದ, ಜಾತಿಯ ಪ್ರಶ್ನೆಯಲ್ಲ ಇಡೀ ರಾಷ್ಟ್ರದ, ಜಗತ್ತಿನ ಪ್ರಶ್ನೆ. ರಾಷ್ಟ್ರೀಯ ಸ್ಮಾರಕಗಳನ್ನು, ಚಾರಿತ್ರಿಕ ಸ್ಥಳಗಳನ್ನು ರಕ್ಷಿಸಿಕೊಂಡು ಬರಬೇಕೆಂದು ಸಂವಿಧಾನಾತ್ಮಕವಾದುದಾಗಿದೆ. ಹೀಗಿರುವಾಗ ಕರ್ನಾಟಕದ ಜನತೆ ನಾರಾಯಣಪುರ ಅಣೆಕಟ್ಟಿನಿಂದ ಮುಳುಗಿ ಹೋಗಲಿರುವ ಕೂಡಲಸಂಗಮವನ್ನು ರಕ್ಷಿಸುವುದು ಆದ್ಯ ಕರ್ತವ್ಯ; ಪವಿತ್ರ ಧರ್ಮ ವಾಗಿದೆ. ನಾಳಿನ ಜನಾಂಗ ಬಸವಣ್ಣನವರ ವಚನಗಳಲ್ಲಿ ಬರುವ 'ಕೂಡಲ ಸಂಗಮ ದೇವ' ಎಂಬ ಅಂಕಿತದ ಸ್ಥಳವೆಲ್ಲಿದೆ ಎಂದು ಕೇಳಿದಾಗ ಅದು 'ಬಸವಸಾಗರ' ಅಥವಾ 'ಸಂಗಮಸಾಗರ' (ನಾರಾಯಣಪುರ ಅಣೆಕಟ್ಟು)ದಲ್ಲಿ ಮುಳುಗಿಹೋಯಿತು ಎಂದು ಹೇಳುವ ದುರದೃಷ್ಟ ಸ್ಥಿತಿಗೊಳಗಾಗಬೇಕೆ? ಒಂದು ಸಂಸ್ಕೃತಿಯ ಮೂಲ ಕೇಂದ್ರ ಕಣ್ಮರೆಯಾಗಬೇಕೆ?

(10ನೇ ಪುಟ ನೋಡಿ)

# ಮಾಣಿಕ್ಯ ದೀಪ್ತಿ

—ಟಿ. ಆರ್. ಮಹಾದೇವಯ್ಯ

## ಕೋಪ – 3

ಕೋಪವು ಮನಸ್ಸನ್ನು ಕದಡಿ ರಾಡಿಗೊಳಿಸುವ ಒಂದು ಸ್ಥಿತಿ. ಮುನಿಸು, ಕನಿಸು, ಸಿಟ್ಟು, ದುಸುಮುಸಿ—ಇವೆಲ್ಲ ಹೆಚ್ಚು ಕಡಿಮೆ ಒಂದೇ. ಹುಸಿಕೋಪ ತೋರಿ ಮಾಯವಾದರೆ, ಶೀಘ್ರಕೋಪ ಹಿಂದು ಮುಂದೆ ನೋಡದೆ ಸ್ಫೋಟಗೊಂಡು ಅನಾಹುತವುಂಟು ಮಾಡುತ್ತದೆ. ಉಗ್ರಕೋಪವಂತೂ ಕ್ರೋಧವಾಗಿ ಮಾರ್ಪಟ್ಟು ದುಷ್ಪರಿಣಾಮವನ್ನೇ ಉಂಟು ಮಾಡೀತು. ಶಾಂತಿಯನ್ನು ದಮನಮಾಡಿ ವಿಜೃಂಭಿಸುವ ಕೋಪ ಎರಡು ರೀತಿಯಲ್ಲಿ ಅಪಾಯಕಾರಿ. ಅದು ಕೋಪಕ್ಕೆ ಗುರಿಯಾದವನನ್ನು ಮತ್ತು ಕೋಪಗೊಂಡವರಿಬ್ಬರನ್ನು ಬಲಿ ತೆಗೆದುಕೊಳ್ಳುತ್ತದೆ.

ಕೋಪ ಒಂದು ತೀವ್ರವಾದ ಮನಃಸ್ಥಿತಿ. ಅದು ಬುದ್ಧಿಯನ್ನು ಮಂಕುಗೊಳಿಸಿ, ವಿವೇಕವನ್ನು ಶೂನ್ಯವಾಗಿಸಿ ದುಡುಕಿ ಏನಾದರೂ ಕೆಡಕು ಮಾಡಿಸಿಬಿಡುತ್ತದೆ. ಸ್ಮರಣೆ, ಸಮಾಧಾನ ತೊಲಗಿ ಗುರುಹಿರಿಯರೆನ್ನದೆ ಮೈಮರೆತು ಉಚಾಯಿಸಿ ಅನ್ನಿಸಿಬಿಡುತ್ತದೆ. ಕೋಪದ ತಾಪ ಇಳಿದ ಮೇಲೆ ಪಶ್ಚಾತ್ತಾಪ ಪಡುವಂತಾಗುತ್ತದೆ. ಸಿಟ್ಟಿನಲ್ಲಿ ಕೊಯ್ದ ಮೂಗು ಮತ್ತೆ ಸರಿಹೋಗಲಾರದು.

ಮನುಷ್ಯನಲ್ಲಿರುವ ಅನೇಕ ಸದ್ಗುಣಗಳ ಚಿತ್ತಾರವನ್ನು ಕೋಪದ ಒಂದು ಮಸಿ ನುಂಗಿ ಬಿಡುತ್ತದೆ. ತಾನೂ ನೆಮ್ಮದಿಯಿಂದ ಬಾಳಿ, ಉಳಿದವರನ್ನು ಶಾಂತಿಯಿಂದಿರಲು ಶಾಂತ ಮನಸ್ಸು ಅತ್ಯಗತ್ಯ. ಕೋಪ ಯಾರಿಗೂ ಹಿತವಲ್ಲ. ಆದರೆ ಅದೊಂದು ಸಹಜ ಗುಣ. ಮಾನವನ ಸ್ಥಾಯಿ ಭಾವಗಳಲ್ಲಿ ಅದೊಂದು. ಇದನ್ನು ಸಂಪೂರ್ಣ ತೊರೆದವ ಯೋಗಿ. ಎಲ್ಲರಿಗೂ ಈ ಯೋಗ ಸಾಧ್ಯವೆ? ಮನಸ್ಸಿಗೆ ಅಹಿತವಾದುದು ನಡೆದಾಗ, ಮನ ಕಲಕುವ ಘಟನೆ ಜರುಗಿದಾಗ ಸಿಟ್ಟು ಬರುತ್ತದೆ. ಅದನ್ನು ನಿಯಂತ್ರಿಸುವಲ್ಲಿ ಮಾನವನ ದೊಡ್ಡತನವಿರುತ್ತದೆ. ಕೋಪದಿಂದ ಅಚಾತುರ್ಯಗಳೇನೂ ನಡೆಯದಷ್ಟರ ಮಟ್ಟಿಗಾದರೂ ಅದನ್ನು ನಿಗ್ರಹಿಸಲು ಯತ್ನಿಸಬೇಕು. 'ಕೋಪ ಬಂದಾಗ ನೂರೆಂದೆಣಿಸು' ಎಂಬ ಸೂಕ್ತಿ ಒಂದು ಸೂತ್ರದಂತಿದೆ.

ಆಧುನಿಕ ವಚನಕಾರ ಎಸ್. ವಿ. ರಂಗಣ್ಣನವರ ವಚನವೊಂದು ಹೀಗಿದೆ:—

ಕೋಪ ಏಳದೆ ಇರುವುದಿಲ್ಲ. ಏಳಬೇಡೆಂದು ಹೇಳಿದರೆ ಪ್ರಯೋಜನವಿಲ್ಲ
ಎದ್ದು ಬರಲಿ ಕೋಪ. ನಾವೆದ್ದು ಅದನ್ನು ಆದರಿಸದಿದ್ದರೆ ಆಯ್ತು.
ತಾನಾಗಿ ಬಿದ್ದು ಮಲಗುವುದು ಎದ್ದು ಬಂದದ್ದು ವ್ಯರ್ಥವಾಯ್ತೆಂದು ಗ್ರಹಿಸಿ
ಬೇಸರಗಾಳ ಅತಿಥಿಯಾಗ ಬಯಸಿದರೆ, ರಂಗಯ್ಯ, ಉಪಚಾರವಿಲ್ಲದ
ಉದಾಸೀನವೆ ಉಪಾಯ.

ಹಿಂದೆ ರಾಜ ಮಹಾರಾಜರ ಕಾಲಕ್ಕೆ ಅರಮನೆಗಳಲ್ಲಿ ಕೋಪ ಗೃಹಗಳು ಎಂದಿರುತ್ತಿದ್ದವು. ಅರಮನೆಯ ಜನಕ್ಕೆ, ಅದರಲ್ಲೂ ರಾಣಿವಾಸದವರಿಗೆ, ಅಸಮಾಧಾನವಾದಾಗ, ಕೋಪ ಬಂದಾಗ ಆ ಮನೆಗೆ ಹೋಗುತ್ತಿದ್ದರು. ತಮಗೆ ಕೋಪ ಬಂದಿದೆ ಎಂಬುದನ್ನು ಸೂಚಿಸುವುದಲ್ಲದೆ, ಬಂದ ಕೋಪವ ಶಮನಮಾಡಿಕೊಳ್ಳಲೂ ಸಹ ಅನುಕೂಲವಾಗುತಿತ್ತೇನೋ! ಆ ವೇಳೆಯಲ್ಲೇ ಸಂಬಂಧ ಪಟ್ಟವರು ಹೋಗಿ ಸಮಾಧಾನಮಾಡಿ ಬರುತ್ತಿದ್ದುದುಂಟು. ಕೋಪದ ಬೇಗೆ ವಾತಾವರಣವನ್ನು ಕೆಡಿಸದೆ ಇರಲು ಇದು ನಿಜಕ್ಕೂ ಒಳ್ಳೆಯ ಏರ್ಪಾಡು.

ಕೋಪ ಹೇಗಿರುತ್ತೆ ? ಮಹಲಿಂಗರಂಗನ ಬಣ್ಣನೆ, ನೋಡಿ:

ಕಣ್ಣು ಕೆಂಪಾಗೆ ಮೋರೆಯು ಬಣ್ಣವತಿ ರೌದ್ರವನು ತಳದಿರ
ಲನ್ನ ಪಾನದಲಿಟ್ಟಿಗಟ್ಟುರಿ ಕೋಪತಾಪದಲಿ ಉಣ್ಣದುರಿಯುತ ಗುರು ಹಿರಿಯರನು
ಕಣ್ಣುಗಾಣದೆ ಬರಿದೆ ಬಗಳುವನನ್ನಿ ಹಿಡಿದವನಂತೆ ನಡುಗುವ ಕುಣಿವ ಕೂಗುವನು||

ಈ ಹಾಳು ಕೋಪ ಯೋಗಿಗಳೆನಿಸಿಕೊಂಡವರನ್ನೇ ಬಿಟ್ಟಿಲ್ಲ. ದೂರ್ವಾಸರ ಶೀಘ್ರಕೋಪ, ವಿಶ್ವಾಮಿತ್ರನ ಅನಿಮಿತ್ತ ಕೋಪ ಎಂಥ ಅಚಾತುರ್ಯಗಳನ್ನು, ಅನಾಹುತಗಳನ್ನುಂಟು ಮಾಡಿತು ಎಂಬುದನ್ನು ಪುರಾಣೇತಿಹಾಸಗಳು ಸಾರಿ ಹೇಳುತ್ತವೆ. ರಾಘವಾಂಕ ಚಿತ್ರಿಸಿರುವ ವಿಶ್ವಾಮಿತ್ರನ ಕೋಪ ಕೇಳಿದರೆ ಎದೆ ನಡುಗುತ್ತದೆ.

ನುಡಿಯುರಿಯನುಗುಳೆ ಕಣ್ ಕಿಡಿಗೆದರೆ ವದನಕ್ಕೆ
ಪಡರೆ ನಿಟಲಂ ಬಿಸಿಯ ಬಿಂದುವಂ ತಳೆಯೆ ಕೈ
ನಡುಗೆ ಪುರ್ಬುಲಗೆ ಮಿಸುಪಧರ ಜಡಿಯೆ ಲಾಕುಳ ಪೊಗೆಯೆ
ತೊಡೆದ ಭಸಿತಂ ಧೂಮವಿಡೆ ಮಯ್ಯರೋಮ ಕೌಂಡ
ಮೃಡನ ಹಣೆಗಿಚ್ಚು ಋಷಿಯಾದಂತೆ ಕೌಶಿಕಂ ಮುನಿದನು

ಕೈ ಹಿಡಿದ ಯೋಗದಂಡ ಹೊಗೆಯಾಡಿದ್ದು, ಧರಿಸಿದ ವಿಭೂತಿಯಿಂದ ಹೊಗೆ ಹೊರಟದ್ದು, ಹಿಡಿದ ಕಮಂಡಲುವಿನಲ್ಲಿದ್ದ ನೀರು ಕುದಿದದ್ದು — ಇದು ವಿಶ್ವಾಮಿತ್ರನ ಕೋಪಾಟೋಪವನ್ನು ವ್ಯಕ್ತ ಪಡಿಸುವ ರೀತಿ!

ಕೋಪವು ಉಂಟುಮಾಡುವ ಕೇಡನ್ನು ಗಮನಿಸಿದ ಕವಿಗಳು ಅದಕ್ಕಿಂತ ದುರ್ಗತಿ ಬೇರೆ ಇಲ್ಲವೆಂದಿದ್ದಾರೆ.

ಕೋಪವೆ ಚಂಡಾಲವ ಸುಭತ ಕೋಪವೆ ದುಷ್ಕರ್ಮನದಜ್ಞತೆ
ಕೋಪವೆ ಜಪತಪದಯಾನುಷ್ಠಾನದಾನ ದಾನಹತ ಕೋಪವೆ ಪ್ರಾಣಾಪಹರಣ
ಕೋಪದಿಂದತ್ಯಧಿಕ ದುರ್ಗತಿಯಿಲ್ಲವವನಿಯಲಿ (ಜೀವಂಧರಚರಿತೆ)

ಕೋಪವು ತನ್ನನ್ನೇ ಹೇಗೆ ಹಾಳು ಮಾಡುತ್ತದೆ ಎಂಬುದನ್ನು ಬಸವಣ್ಣನವರು ಹೀಗೆ ಮನಗಾಣಿಸಿದ್ದಾರೆ.

ತನುವಿನ ಕೋಪ ತನ್ನ ಹಿರಿತನದ ಕೇಡು ಮನದ ಕೋಪ ತನ್ನ ಅರುಹಿನ ಕೇಡು
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ ನೆರಮನೆ ಸುಡುವುದೇ ಕೂಡಲ ಸಂಗಮದೇವಾ.

ಕೋಪಿ ಒಳ್ಳೆಯ ಸಂಗಾತಿಯಾಗಲಾರ. ಮಾತು ಮಾತಿಗೆ ಜಗಳ, ವೈ
ನಸ್ಯ. ಅವನಇಹಪರ ದೂರ ಎಂದಿದ್ದಾರೆ ಅನುಭವಿಗಳು. ಏಕೆಂದರೆ ಆತ ಇ
ಬದುಕಿರುವಾಗ ತನ್ನ ಮನಸ್ಸನ್ನು ಕದಡಿಕೊಳ್ಳುವುದಲ್ಲದೆ, ಸಮಾಜದ ವಾತಾವರ
ವನ್ನು ಕಲುಷಿತಗೊಳಿಸುತ್ತಾನೆ. ಶಾಂತಿ ಮತ್ತು ನಿರ್ಮಲತೆಯ ವೈರಿಯಾದ ಆ
ಮಾಡುವ ಧ್ಯಾನ ಪೂಜೆಗಳು ವ್ಯರ್ಥ. 'ಕೋಪಿ ಮಜ್ಜನಕ್ಕೆರೆದರೆ ರಕ್ತದ ಧಾರ
ಎಂಬ ಮಾತು ನಿಜ.

ಸರಿ, ಇದಾಯಿತು ಕೋಪ ಲವಲೇಶವೂ ಇಲ್ಲದ ಸಂಪೂರ್ಣ ಸಾತ್ವಿಕ
ವ್ಯವಹಾರಿಕ ಜೀವನದಲ್ಲಿ ಸಾಧ್ಯವೆ? ಸಾಧುವೆ?—ಇದು ಒಬ್ಬ ವಿಚಾರಶೀಲ ವ್ಯ
ಹಾರಸ್ಥ ಕೇಳುವ ಪ್ರಶ್ನೆ. ಕೆಟ್ಟದ್ದನ್ನು ಕಂಡಾಗ, ಅನ್ಯಾಯದ ವಿರುದ್ಧ ಪ್ರತಿಭಟ
ನಡೆಸುವಾಗ, ದುರ್ಜನರನ್ನು ಶಿಕ್ಷಿಸುವಾಗ, ಕೆಡುಕರನ್ನು ಸರಿದಾರಿಗೆ ತರುವಾ
ಕೋಪಗೊಳ್ಳದಿದ್ದರೆ ಆಗುತ್ತದೆಯೇ? ಸಾಧುವಾದ ಪ್ರಶ್ನೆ. ಆದರೆ ಇಂಥ ಕೋ
ಮಾರಕವಲ್ಲ, ತಾರಕ ಸಹಾಯದಿಂದ ಕೂಡಿದ ಈ ಕೋಪದಲ್ಲಿ ಸುಡುವ ದುರ್ಗು
ವಿಲ್ಲ, ಬಿಸಿ ಮುಟ್ಟಿಸುವುದಷ್ಟೆ ಅದರ ಕೆಲಸ. ಇದನ್ನೇ ಸ್ವಾತ್ವಿಕ ಕೋಪವೆನ್ನುತ್ತಾರೆ
ಇಂಥದು ಆಗೀಗ ಬೇಕಾಗಬಹುದು.

ಇನ್ನೊಬ್ಬರಿಗೆ ಕೆಡುಕಾಗದಂಥ ಸ್ವಾತ್ವಿಕ ಕೋಪ ಮೆಲುಗಾಳಿಯಂತೆ ಹಿತಕಾ
ಅದು ಉಗ್ರವಾಗಿ ಅಪಾಯಕಾರಿಯಾಗದಂತೆ ನೋಡಿಕೊಳ್ಳುವುದರಲ್ಲಿ ನಮ್ಮ ಜಾ
ತನವಿದೆ. ಇದು ನಮ್ಮ ವಿವೇಕಕ್ಕೆ ಸಂಬಂಧಪಟ್ಟ ವಿಚಾರ.

(ಆಕಾಶವಾಣಿ ಕೃಪೆಯಿಂದ)

---

ಪುಣ್ಯಕ್ಕೆ 'ಸಮಗ್ರತಾ ಸಂಘಟನೆ'ಯ ಅಡಿಯಲ್ಲಿ ಕೂಡಲಸಂಗಮಕ್ಷೇತ್ರದ
ರಕ್ಷಣೆ ಕರ್ನಾಟಕದ ಚಾರಿತ್ರಿಕ ಜವಾಬ್ದಾರಿ ಎಂಬ ಮನವಿ ಪತ್ರವೊಂದನ್ನು ರಾಜ್ಯ
ಮುಖ್ಯ ಮಂತ್ರಿಗಳಿಗೆ ಅರ್ಪಿಸುವ ಬೃಹತ್ ಯೋಜನೆ ಸನ್ನದ್ಧವಾಗಿದೆ. ಮೂಲಕ್ಷೇತ್ರ
ವನ್ನು ಮುಳುಗದ ಹಾಗೆ ಉಳಿಸುವುದು ಸಾಧ್ಯ ಎಂದು ತಜ್ಞ ಇಂಜನಿಯರುಗಳು ಅಭಿ
ಪ್ರಾಯಪಿತ್ತಿದ್ದಾರೆ. ಹೀಗಿರುವಾಗ ಜಾತ್ಯತೀತತೆಯ ಪ್ರತೀಕ, ಕಾಯಕತತ್ವದ
ಪ್ರತಿಪಾದಕ, ಸರಿಸಮಾನತೆಯ ರೂವಾರಿ ಬಸವಣ್ಣನವರ 'ಕೂಡಲಸಂಗಮ'ದ
ರಕ್ಷಣೆ ಅಸಾಧ್ಯವಾಗುವುದೆ? ಕರ್ನಾಟಕದ ಜನತೆ ಕಾರ್ಯೋನ್ಮುಖರಾಗಬೇಕಾಗಿದೆ.
ಅದಕ್ಕಾಗಿ ಎಚ್ಚೆತ್ತ, ದೃಢನಿರ್ಧಾರದ, ಸಂಕಲ್ಪ ಚೇತನಗಳಿಂದು ಪಂಜಾಬಿನ 'ಕರ
ಸೇವೆ'ಯಂತೆ 'ಕಾಯಕ ಸೇವೆ'ಯ ಮೂಲಕ ಸಂಘಟನೆ, ಹೋರಾಟ, ಕೂಡಲ
ಸಂಗಮದ ರಕ್ಷಣೆಯ ಮಹಾಮಣಿಹದಲ್ಲಿ ತೊಡಗಿದ್ದಾರೆ. ನಾಡಿನ ಮಹಾಜನತೆ
ಸಹಕರಿಸುವ ಸಮಯ ಇದು. ಸ್ಮಾರಕವೊಂದರ ಅಳಿವು ಸಂಸ್ಕೃತಿಯೊಂದರ ಅಂಗವೇ
ಬಿದ್ದುಹೋದಂತೆ ತನ್ಮೂಲಕ ರಾಷ್ಟ್ರ ಜೀವನದ ಚಾರಿತ್ರಿಕ ನಷ್ಟವಾದಂತೆ. ಕೂಡಲ
ಸಂಗಮದ ರಕ್ಷಣೆ ಕರ್ನಾಟಕದ ಜನತೆಯ ಅಭಿಮಾನದ ರಕ್ಷಣೆ.

# ಬಸವ ಪ್ರತಿಜ್ಞಾ

—ಟಿ. ಎನ್. ಮಹದೇವಯ್ಯ

“ಅರ್ಥವನರ್ಥವ ಮಾಡಿ ಕೋಳಾಹಳಂಗೈವುತ್ತಿರಲಿ, ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿವುತ್ತಿರಲಿ, ಮುಟ್ಟಿದ ಸ್ತ್ರೀಯು ಕಣ್ಣ ಮುಂದೆ ಅಭಿಮಾನಗೊಂಡು ನೆರೆವುತ್ತಿರಲಿ, ಇಂತೀ ತ್ರಿವಿಧವು ಹೊರಗಣವು, ಇನ್ನೆನ್ನಂಗದ ಮೇಲೆ ಬರಲಿ, ಹಿಡಿ ಖಂಡವ ಕೊಯ್ಯಲಿ, ಇಕ್ಕುವ ಶೂಲ ಪ್ರಾಪ್ತಿಸಲಿ, ಹಾಗೊಂದೆಸೆ ಹನ್ನೊಂದೆಸೆಯಾಗಿ ಮಾಡುತಿರಲಿ, ಮತ್ತೆಯೂ ಲಿಂಗಾರಾಧನೆಯು ಮಾಡುವೆ, ಜಂಗಮಾರಾಧನೆಯು ಮಾಡುವೆ, ಪ್ರಸಾದಕ್ಕೆ ತಪ್ಪೆ, ಇಂತಪ್ಪ ಭಾಷೆ ಕಿಂಚಿತು ಹುಸಿಯಾದರೆ ನೀನಂದೇ ಮೂಗು ಕೊಯ್ಯಿ ಕೂಡಲ ಸಂಗಮದೇವ.”

ನಿಷ್ಠಾಭಕ್ತಿಯ ಬಲದಿಂದ ಆತ್ಮ ಬಲದ ಪ್ರಚಂಡ ಜ್ಯೋತಿಯು ಪ್ರಜ್ವಲಿಸಿ ಹೊಳೆಯುವುದು. ಅವರ ದೇಹದ ಆವೇಶ, ಬಲ್ಮೆಗಳೆಲ್ಲಾ ತನುವಿನ ಮೇಲಿನ ಅಭಿಮಾನವನ್ನು ಕಡಿದು ಪುಡಿಮಾಡಲು ಉಪಯೋಗಿಸಲ್ಪಡುವುವು. ತನ್ನದೆಂಬುದೆಲ್ಲವೂ ದೇವನ ಮುಂದೆ ಅಳಿದು ಹೆಸರಿಲ್ಲದೆ ಹೋಗುವುದು. ಸೂರ್ಯನ ಬಿಸಿಲಿನಲ್ಲಿ ನಕ್ಷತ್ರ ಹೊಳೆಯುವಂತೆ ಪರಿಣಮಿಸುವುದು. ಅವರ ನಿಷ್ಠೆಗೆ ಯಾವ ತೊಂದರೆಗಳು ಬಂದರೂ ಅವರು ಅದನ್ನು ಸಹಿಸುವರು. ಮನೋನಿಗ್ರಹತೆಯ ಪರಮಾವಧಿಯ ಫಲವನ್ನು ಜೀವನು ಕಾಣುವನು. ಆತ್ಮಬಲದ ರೀತಿಯನ್ನು ಅನುಭವಿಸುವನು. ಹೆಂಡತಿ ಮಕ್ಕಳು ಅಡ್ಡಿ ಬಂದರೂ ದೇವರನ್ನು ಬಿಡರು. ಮನವನ್ನು ತಮ್ಮ ಬಲದಲ್ಲಿಟ್ಟುಗೊಂಡು ವ್ಯವಹರಿಸುವರು. ಭಗವಾನ್ ಬುದ್ಧದೇವನು ಅದಕ್ಕಾಗಿಯೇ ಈ ರೀತಿ ನುಡಿದಿರುವನು. “ಮನಸ್ಸನ್ನು ನಿರೋಧಿಸದಿರುವ ದುಷ್ಟರು ಭಿಕ್ಷಾಜೀವಿಗಳಾಗಿರುವುದಕ್ಕಿಂತಲೂ ಕಾದಕಬ್ಬಿಣವನ್ನು ಸೇವಿಸುವುದುತ್ತಮವು”

ಕಾಮಿನಿ ಕಾಂಚನಗಳಾಸೆಯಾಗಲಿ, ತನುವಿನ ಮೇಲಿನ ಮಮತೆಯಾಗಲಿ, ಪುತ್ರಾವ ವ್ಯಾಮೋಹವಾಗಲಿ ಜೀವವನ್ನು ಮುಂದುವರಿಯಲು ಬಿಡದು. ದೇವನ ಆರಾಧನೆಗೆ ಅಡ್ಡಿ ಬರುವುದು. ಆಗ ಭಕ್ತನು ಲೆಕ್ಕಿಸದೆ ಎಲ್ಲವನ್ನೂ ತ್ಯಜಿಸಿಬಿಡುವನು. ಒಮ್ಮೆ ಭಗವಾನ್ ರಾಮಕೃಷ್ಣ ಪರಮಹಂಸರ ಶಿಷ್ಯರೊಬ್ಬರು “ಪ್ರಾಪಂಚಿಕನು ಪರಮಾರ್ಥಿಯಾದರೆ ಹೆಂಡಿರು ಮಕ್ಕಳನ್ನು ಅಲಕ್ಷಿಸಬೇಕಾಗುವುದು, ಹೀಗೆ ಮಾಡಿದಾಗ ಆ ಹೆಂಡತಿಯು ಗಂಡನ ಔದಾಸೀನ್ಯವನ್ನು ನೋಡಿ ಆತ್ಮಹತ್ಯೆಮಾಡಿಕೊಳ್ಳಲು ಸಿದ್ಧಳಾದರೆ ಅದಕ್ಕೆ ಆತನೇನು ಮಾಡಬೇಕು?” ಎಂದು ಕೇಳಿದನು. ಅದಕ್ಕೆ ಅವರು “ಭಗವತ್ಸಾಧನೆಯ ಕಾರ್ಯದಲ್ಲಿ ಅಡ್ಡಲಾಗುವ ಹೆಂಡತಿಯನ್ನು ಮನುಷ್ಯನು ಅವಶ್ಯ

ವಾಗಿ ತೊಲಗಬೇಕೆ ಹೊರ್ತು ದೇವರನ್ನು ತೊರೆದು ಜೀವಿಸಲಾಗದು. ಒಂದು ವೇಳೆ ಹೆಂಡತಿಯು ಆತ್ಮಹತ್ಯೆ ಮಾಡಿಕೊಂಡರೂ ಅಡ್ಡಿಯಿಲ್ಲ"—ಅಂದುಬಿಟ್ಟರು. ಸತ್ಯದ ಉಪಾಸಕರಿಗೆ ಈ ಸಾಧಾರಣ ಭಾವನೆಗಳೂ ಅಷ್ಟಾಗಿ ಅವರ ಮನಸ್ಸನ್ನು ಕದಲಿಸಲಾರವು. ಯಾವ ಭಕ್ತನು ದೇವನನ್ನು ತನ್ನ ಜೀವಕ್ಕಿಂತ ಹಿರಿದಾಗಿ ಉಸಿರಿಗಿಂತ ದೊಡ್ಡದಾಗಿ ಭಾವಿಸಿ, ಜಾಗ್ರತ್, ಸ್ವಪ್ನ, ಸುಷುಪ್ತಗಳಲ್ಲೂ ಬಿಡದೆ ಆರಾಧಿಸುವನೋ ಆತನ ಭಕ್ತಿಯಲಿ ಆವೇಶವು ಬಹಳ ವೇಗವಾದುದು. ಆ ವೇಗದ ಹೊಡೆತದಲ್ಲಿ ಜಗತ್ತಿಗೆ ಸಂಬಂಧಪಟ್ಟ ಎಲ್ಲ ತೀಕ್ಷ್ಣ ಭಾವನೆಗಳೂ ನುಚ್ಚಾಗಿ ಹೋಗುವುವು. ಇದು ಮನುಷ್ಯನ ಒಂದು ಅವಸ್ಥೆಯ ಅನುಭವ. ದೇಶಹಿತಕ್ಕಾಗಿ ಕಣ್ಣೀರು ಬಿಡುತ್ತಿದ್ದ ಸ್ವಾಮಿ ವಿವೇಕಾನಂದರೇ ಈ ಅವಸ್ಥೆಯಲ್ಲಿ ಹೀಗೆ ಅಂದಿರುವರು. "ನನ್ನ ದೇಶಭಕ್ತಿಯೆಲ್ಲಾ ಹೋಯಿತು ಎಲ್ಲವೂ ಹೋಗಿಬಿಟ್ಟಿತು. ಈಗ ನನ್ನ ತಾಯಿ ಮಾತ್ರ. ನನ್ನ ತಾಯಿ ಮಾತ್ರ." ಇದು ಭಕ್ತಿಯ ಆವೇಶದ ಪರಮಾವಧಿ. ರೋಮ ರೋಮದಲ್ಲೂ ದೇವನು ತುಂಬಿರುವನು. ದೇವನಾರಾಧನೆಯ ಪ್ರೀತಿ ತುಂಬಿರುವುದು.

ಸ್ವಾಮಿ ರಾಮತೀರ್ಥರು ಆದಕ್ಕಾಗಿಯೇ ಒಮ್ಮೆ ಈ ರೀತಿ ಅಂದಿರುವರು. "ನಿಜವಾದ ಧರ್ಮರಹಸ್ಯವು ಈಶ್ವರನ ಮೇಲಿನ ವಿಶ್ವಾಸದಲ್ಲಿ ಇರುವುದಿಲ್ಲ. ಆದರೆ ಮನುಷ್ಯನಲ್ಲಿಯ ಈಶ್ವರತ್ವದಮೇಲಿನ ಅಚಲ ಶ್ರದ್ಧೆಯಲ್ಲಿರುತ್ತದೆ." ಈ ಧರ್ಮರಹಸ್ಯದ ತಿಳಿವಳಿಕೆಯಿಂದಲೇ ಆ ಶ್ರದ್ಧೆಯು ಬೆಳೆಯುವುದು. ಧರ್ಮರಹಸ್ಯದ ಪೂರ್ಣ ತಿಳಿವಳಿಕೆಗಾಗಿಯೇ ನಿಷ್ಠೆಯು ಬೇಕು. ನಿಷ್ಠೆಯು ಫಲರೂಪವೇ ಈ ವಿಧವಾದ ಉಚ್ಚ ತ್ಯಾಗ. ಯಾವ ನುಡಿಗಳನ್ನು ಸಾಧಾರಣ ಮನುಷ್ಯನು ಎಂತಹ ಕಾರ್ಯಕ್ಕಾದರೂ ತುದಿನಾಲಿಗೆಯಲ್ಲಿ ಉಚ್ಚರಿಸಲಾರನೋ, ಅಂತಹ ತ್ಯಾಗದ ನುಡಿಗಳು ಧಾರಾಪೂರ್ವಕವಾಗಿ ಇಲ್ಲಿ ಹರಿದುಬಿಟ್ಟಿದೆ. ಇಂತಹ ಅತ್ಯಂತ ಉಚ್ಚತರವಾದ "ತ್ಯಾಗದ ಹೊರತಾಗಿ ಆತ್ಮ ಜ್ಞಾನವಾಗಲಾರದು"—ಎನ್ನುತ್ತಾರೆ ಸ್ವಾಮಿ ರಾಮತೀರ್ಥರು. ಸಾಕ್ಷಾತ್ಕಾರದ ಅನುಭವವೂ ಆಗಲಾರದು. ಆದುದರಿಂದಲೇ ಈ ಪಂಚ ಮಮಕಾರಗಳ ತ್ಯಾಗವು ಗುರಿಸೇರಲು ಹಾದಿ ತೋರಿಸುತ್ತದೆ ಲಿಂಗಾಂಗ ಸಾಮರಸ್ಯ ಅವಸ್ಥೆಗೆ ಜೀವನನ್ನು ಕೊಂಡೊಯ್ಯಲು ಸಹಕಾರಿಯಾಗುತ್ತದೆ. ಇದನ್ನೆ ಶ್ರೀಕೃಷ್ಣನು ಗೀತೆಯಲ್ಲಿ ಹೀಗೆಂದು ನುಡಿದಿರುವನು. ನಿರ್ಮಾನಮೋಹಾಜಿತ ಸಂಗದೋಷಾ ಅಧ್ಯಾತ್ಮನಿತ್ಯಾವಿನಿವೃತ್ತ ಕಾಮಾಃ। ದ್ವಂದ್ವೈರ್ವಿಮುಕ್ತಾಃ ಸುಖದುಃಖ ಸಂಜ್ಞೈರ್ಗಚ್ಛಂತ್ಯ ಮೂಢಾಃ ಪದಮ ವ್ಯಯಂತತ್". ಅಭಿಮಾನ ಮೋಹಗಳನ್ನ ಕಳೆದು ಆಸಕ್ತಿ ದೋಷವನ್ನು ತೊರೆದು ಪರಮಾತ್ಮದಲ್ಲಿ ನಿರಂತರ ಚಿತ್ತವಿಟ್ಟು ಸರ್ವ ಕಾಮಗಳಿಂದ ದೂರರಾದ ಮತ್ತು ಸುಖದುಃಖಗಳೆಂಬ ದ್ವಂದ್ವದಿಂದ ಮುಕ್ತರಾದ ಆ ಜ್ಞಾನವಿಲ್ಲದ ಮಹಾತ್ಮರು ಅಶಾಶ್ವತ ಪದವಿಯನ್ನು ಸೇರುವರು." ಈ ವಚನದಲ್ಲಿ ಬಸವೇಶ್ವರನ ನಿಷ್ಠಾಭಕ್ತಿ, ಸ್ವಾರ್ಥತ್ಯಾಗ, ಇಂದ್ರಿಯಗಳಾದ ಪಂಚೇಂದ್ರಿಯಗಳ

ಅಭಿಮಾನಗಳ ಅಳಿವುಗಳು ಪೂರ್ಣವಾಗಿ ಬೆಳೆದ ಕುಸುಮಗಳು ಚೆನ್ನಾಗಿ ಕಾಣು ತ್ತಿವೆ.

ನನಗೆ ಸಂಬಂಧಪಟ್ಟಿರುವುದೆಂದು ತಿಳಿದಿರುವ ಎಲ್ಲ ಧನಧಾನ್ಯಾದಿ ಐಶ್ವರ್ಯ ಗಳನ್ನು ಯಾರು ಬೇಕಾದರೂ, ತಮ್ಮ ಇಷ್ಟಬಂದ ಹಾಗೆ ಸೂರೆಕೊಟ್ಟುಬಿಡಲಿ. ನನ್ನ ಮಕ್ಕಳನ್ನೇ ತುಂಡು ತುಂಡುಮಾಡಿ ಕಡಿದು ಬಿಸಾಡುತ್ತಿರಲಿ, ನನ್ನ ಕೈಹಿಡಿದ ಪತ್ನಿ ಯನ್ನೂ ಭ್ರಷ್ಟಗೊಳಿಸಿ ಬೇಕಾದಹಾಗೆ ಅಪಮಾನ ಮಾಡಲಿ, ಇವೆಲ್ಲವೂ ನನ್ನ ಜೀವನಕ್ಕೆ ಸಂಬಂಧಪಟ್ಟವುಗಳಲ್ಲ. ಎಲ್ಲವೂ ಹೊರಗಣವು. ನನ್ನ ಮೈಮೇಲೆ ಬಂದು ನನ್ನ ಶರೀರವನ್ನು ಶೂಲಕ್ಕೇರಿಸಲಿ. ದೇಹ ಮಾಂಸಗಳನ್ನು ನುಚ್ಚುನೂರಾಗಿ ತುಂಡ ರಿಸಿ ಕೆಡವಲಿ, ಅವರಿಚ್ಛೆ ಬಂದಂತೆ ಹಿಂಸೆ ಮಾಡಲಿ. ಹಾಗಾದರೂ ನಾನು ಆನಂದದಿಂದ, ಚರಾರ ಶಬ್ದವನ್ನೆತ್ತದೆ ಪರಮಾತ್ಮನನ್ನು ಪೂಜಿಸುವೆನು. ಶ್ರೇಷ್ಠ ರಾದ ಜ್ಞಾನಿಗಳ ಚರಣ ಸೇವೆಯನ್ನು ಮಾಡುವೆನು. ಈ ನನ್ನ ಪ್ರತಿಜ್ಞೆಗೆ ನಾನು ತಪ್ಪಿದರೆ ನೀನು ಬೇಕಾದ ಶಿಕ್ಷೆಯನ್ನು ವಿಧಿಸು ಪರಮಾತ್ಮ" ಎಂದಿರುವನು. ●

---

# ಮಹಾದೇವಿ ಅಕ್ಕನ ವಚನಗಳು

## ಸಂಸಾರ ಹೇಯ

ಆವಾಗಳು ಎನ್ನ ಮನ ಉದರಕ್ಕೆ ಹರಿವುದು. ಕಾಣಲಾರೆನಯ್ಯ ನಿಮ್ಮುವನು. ಭೇದಿಸಲರಿಯೆನಯ್ಯ! ಮಾಯದ ಸಂಸಾರದಲ್ಲಿ ಸಿಲುಕಿದೆನು. ಎನ್ನ ದೇವ ಚನ್ನಮಲ್ಲಿಕಾರ್ಜುನಯ್ಯಾ ನಿಮ್ಮ ಹೊದ್ದುವಂತೆ ಮಾಡಾ ನಿಮ್ಮ ನಿಮ್ಮ ಧರ್ಮ.

ಅಮೇಧ್ಯದ ಹಡಿಕೆ, ಮೂತ್ರದ ಕುಡಿಕೆ, ಎಲುವಿನ ತಡಿಕೆ, ಕೀವಿನ ಹಡಿಕೆ ಸುಡಲೀ ದೇಹದ ಒಡಲುವಿಡಿದು ಕೆಡದಿರು. ಚನ್ನಮಲ್ಲಿಕಾರ್ಜುನನರಿ ಮರುಳೇ.

ಕಾಯಕ್ಕೆ ನೆಳಲಾಗಿ ಕಾಡಿತ್ತು ಮಾಯೆ. ಪ್ರಾಣಕ್ಕೆ ಮನವಾಗಿ ಕಾಡಿತ್ತು ಮಾಯೆ. ಮನಕ್ಕೆ ನೆನಹಾಗಿ ಕಾಡಿತ್ತು ಮಾಯೆ. ನೆನಹಿಂಗೆ ಅರಿವಾಗಿ ಕಾಡಿತ್ತು ಮಾಯೆ. ಜಗದ ಜಂಗುಳಿಗಳಿಗೆ ಬೆಂಗೋಲನೆತ್ತಿ ಕಾಡಿತ್ತು ಮಾಯೆ. ಚನ್ನಮಲ್ಲಿಕಾರ್ಜುನ, ನೀನೊಡ್ಡಿದ ಮಾಯೆಯನಾರು ಗೆಲಲಾರರು.

# ಜ್ಞಾತ ಶಿವಶರಣೆಯರ ಅನುಭಾವ ನುಡಿ

—ಪ್ರೊ. ಎಸ್. ಎಸ್. ಭೂಸರೆಡ್ಡಿ
ಕರ್ನಾಟಕ ವಿಶ್ವವಿದ್ಯಾಲಯ, ದಾರವಾಡ.

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಪ್ರಮಥ ಪುಂಗವರು ನಮ್ಮ ನಾಡಿನ ...ರ್ಮಿಕ, ಸಾಮಾಜಿಕ, ನೈತಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಾಧಿಸಿದ ...ದ್ಧಿ ಅಭೂತಪೂರ್ವ. ಮುಂಗಾರ ಮೊದಲ ಹನಿ ಬಿದ್ದೊಡನೆಯೇ ಹಸಿರು ಮೊಳೆ...ಒಡೆದು ಸುಳಿದೆಗೆದು ಗರಿ ಗರಿಯಾಗಿ ಹಚ್ಚ ಹಸಿರಾಗಿ ಮೈದೋರುವಂತೆ ಬಸವನ ...ವತಾರವಾದೊಡನೆಯೇ ಕನ್ನಡನಾಡಿನ ಗೆಣ್ಣೆ ಗೆದ್ದುಗಳಲ್ಲಿ ಸುಧಾರಕರು, ಮೇಧಾವಿ...ಳು ದಾರ್ಶನಿಕರು, ಯೋಗಿಗಳು ಹೆಣ್ಣೆನ್ನದೆ, ಗಂಡೆನ್ನದೆ ಮೇಲೆನ್ನ ಕೀಳೆನ್ನದೆ ...ನೂರಾರು ಸಂಖ್ಯೆಯಲ್ಲಿ ಬಂದೇ ಬಂದರು. ಅವರು ನುಡಿದ ನುಡಿ ಮುತ್ತಿನ ಹಾರ, ...ಮಾಣಿಕ್ಯದ ದೀಪ್ತಿ, ಸ್ಫಟಿಕದ ಸಲಾಕೆ, ತಮಂಧಘನವಾದ ಅಂದಿನ ಆವರಣದಲ್ಲಿ ...ಚಾರ ದೀಪಾವಳಿ ಬೆಳಗಿಸಿದ ಕೀರ್ತಿ ಇವರದು[1]. ಆದುದರಿಂದ ಕರ್ಮಹೋಗಿ ...ಕ್ರಿಯೆಯಾಯಿತು. ಧರ್ಮ ಹೋಗಿ ದಯಾಮಯ ಸಾಕಾರ ಸ್ವರೂಪವಾಯಿತು. ...ಕಾಯಕವು ಸಮಾಜದ ನಾಡಿಯಾಯಿತು. ಕಾಲಮಾನ ಪರಿಸ್ಥಿತಿಗನುಸಾರವಾಗಿ ಅದು ಜನಾಭಿಮುಖವಾಯಿತು. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಸ್ವಾತಂತ್ರ್ಯದ ಹೊಸಗಾಳಿ ಬೀಸಿತು. ಬಹುಕಾಲದಿಂದಲೂ ಪಂಡಿತರ ವಿಶಿಷ್ಟವರ್ಗದ ಸೊತ್ತಾಗಿದ್ದ ರಾಜ್ಯಲಕ್ಷ್ಮಿಯ ತೊತ್ತಾಗಿದ್ದ ಸಾಹಿತ್ಯ ಸರಸ್ವತಿ ಜನಸಾಮಾನ್ಯರ ಹೃದಯಕ್ಕೆ ನೇರ ವಾಗಿ ಮುಟ್ಟುವಂತಾದುದು, ತಟ್ಟುವಂತಾದುದು ಈ ಸುವರ್ಣಮಯ ಸನ್ನಿವೇಶ ದಲ್ಲಿಯೇ.

ಪರಸ್ತ್ರೀಯರನ್ನು ಮಹಾದೇವಿಯಂತೆ, ಪ್ರತ್ಯಕ್ಷ ಕಪಿಲ ಸಿದ್ಧಮಲ್ಲಿಕಾರ್ಜುನನಂತೆ ಕಂಡ ಹಿರಿಮೆ ಬಸವಾದಿ ಪ್ರಮಥಪುಂಗವರಿಗೆ ಸಂಪೂರ್ಣವಾಗಿ ಸಲ್ಲುತ್ತದೆ. ಶೂದ್ರ ರೆಂದು ದೂರದಲ್ಲಿಟ್ಟಿದ್ದ, ಅವಜ್ಞೆಗೆ ಪಕ್ಕಾಗಿದ್ದ, ಅಲಕ್ಷ್ಯಕ್ಕೆ ಒಳಗಾಗಿದ್ದ ಮಹಿಳೆ ಯರ ಸರ್ವತೋಮುಖ ಏಳ್ಗೆಗಾಗಿ ಬಸವಣ್ಣನವರು ಮಹಾಮನೆಯಲ್ಲಿ ಅನುಭವ ಮಂಟಪದಲ್ಲಿ ಅವರಿಗೆ ಸಂಪೂರ್ಣ ಸ್ವಾತಂತ್ರ್ಯವಿತ್ತರು. ಸತಿ–ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ. ಗಂಡ–ಹೆಂಡರ ಮನಸ್ಸು ಒಂದಾದರೆ ದೇವರ ಮುಂದೆ ನಂದಾದೀಪ ಹಚ್ಚಿದಂತೆ ಎಂದು ಸಾರಿ ಸಂಸಾರದಿಂದ ಸದ್ಗತಿ ಸಾಧಿಸುವ ಮುಕ್ತಿ ಕಾಂತೆಯನ್ನು ಹೊಂದುವ ಸುವರ್ಣಮಾಧ್ಯಮ ಮಾರ್ಗವನ್ನು ತೋರಿದರು. ಹೆಣ್ಣು

1 ಶಿವದಾಸ ಗೀತಾಂಜಲಿ–ಎಲ್. ಬಸವರಾಜು ಪ್ರಸ್ತಾವನೆ ಪು. ೩.

ಮಾಯೆಯಲ್ಲ, ಮಣ್ಣು ಮಾಯೆಯಲ್ಲ ಎಂದು ತಿಳಿಸಿ ಹೆಣ್ಣು ಸರಸ್ವತಿಯ ಕಣ್ಣ
ಆದರಿಸಿದಳು, ಮಾನ ಮನ್ನಣೆ ಇತ್ತರು. ಇದರ ಅಮೃತ ಫಲವಾಗಿ ಸುಮ
ನಲ್ವತ್ತೊಂದಕ್ಕೂ ಮಿಕ್ಕಿ ವಚನಕಾರ್ತಿಯರೂ, ಹದಿನೆಂಟಕ್ಕೂ ಮಿಕ್ಕಿ ಶರಣ ದಂ
ಗಳು ಹೊರಹೊಮ್ಮಿದರು. ತಮ್ಮ ಅಪಾರ ಅನುಭವದ ಅಮೃತವನ್ನು ವಚನ
ಮೂಲಕ ಬಿತ್ತರಿಸಿದ್ದಾರೆ. ಅದು ಜಾಗತಿಕ ಸಾಹಿತ್ಯದಲ್ಲಿಯೇ ಅಪೂರ್ವ ಪ್ರ
ವಾಯಿತು. ವೀರವಿರಾಗಿಣಿ ಜ್ಞಾನದ ಖಣಿ ಅಕ್ಕಮಹಾದೇವಿ ಕನ್ನಡ ಸಾಹಿ
ಪ್ರಪಂಚದ ಪ್ರಪ್ರಥಮ ಕವಿಯತ್ರಿಯಾದರೆ, ಬಸವಣ್ಣನವರ ಧರ್ಮಪತ್ನಿ ನೀಲಾಂ
ಲೋಕ ಸಾಹಿತ್ಯದ ಪ್ರಪ್ರಥಮ ಹರಿಕಾರಳಾಗಿರುವುದು ಕನ್ನಡಿಗರಿಗೆ ಹೆಮ್ಮೆಯ ಸಂಗ
ವ್ಯೋಮಮೂರತಿ ವೈರಾಗ್ಯ ಚಕ್ರವರ್ತಿ ಅಲ್ಲಮಪ್ರಭುದೇವರನ್ನು ಮುಕ್ತಾಯ
ವಾದದಲ್ಲಿ ಸೋಲಿಸಿದರೆ ಮುಕ್ತಾಯಕ್ಕರನ್ನು ಸತ್ಯಕ್ಕ ಸೋಲಿಸಿದ್ದಾಳೆ. ಹೀಗೆ ಶ
ತಮ್ಮ ಸ್ವತಂತ್ರವಾದ ವೈಚಾರಿಕ ನಿಲುಮೆಯಿಂದ ಉನ್ನತ ಮನೋಧರ್ಮ ರೂಪಿ
ಕೊಂಡಿದ್ದರು. ಈ ದಿಸೆಯಲ್ಲಿ ತಮ್ಮ ವಚನರಚನೆಯಿಂದ ಸಾಹಿತ್ಯ ಲೋಕ
ಅಪೂರ್ವ ಕಾಣಿಕೆ ನೀಡಿದ ಕೆಲವು ಅಜ್ಞಾತ ಶಿವಶರಣೆಯರ ನುಡಿಗಳ ಅಮೃತವನ
ಸವಿಯೋಣ.

ದೊಂತಾದೇವಿ ಕಾಶ್ಮೀರದಿಂದ ಕಲ್ಯಾಣಕ್ಕೆ ಬಂದ ಅರಸುಗುವರಿ. ಏಕದೇವ
ಪಾಸನೆಯ ದಿವ್ಯ ತತ್ತ್ವವನ್ನು ಒಂದೇ ಒಂದು ಸೊಗಸಾದ ವಚನದಲ್ಲಿ ಹೀಗೆ ವಿಶ್ಲೇ
ಷಿಸಿದ್ದಾಳೆ:

" ಊರೊಳಗಣ ಬಯುಲು
ಊರ ಹೊರಗಣ ಬಯಲಿಂದುಂಟೆ?
..........................................
ಎಲ್ಲಿ ನೋಡಿದರೆ ಬಯಲೊಂದೇ "

ಹಡಪದ ಲಿಂಗಮ್ಮ ಇನ್ನೊಬ್ಬ ಶರಣೆ. ಬಸವಣ್ಣನವರ ಆಪ್ತ ಕಾರ್ಯದರ್ಶಿ ಹಡಪದ
ಅಪ್ಪಣ್ಣನವರ ಪುಣ್ಯಾಂಗನೆ. ಆಕೆಯ ಆತ್ಮದ ಕೆಚ್ಚು ಇಂದಿಗೂ ಮಹಿಳೆಯರಿಗೆ
ಸ್ಫೂರ್ತಿ ಚೈತನ್ಯವನ್ನೀಡುವ ಸಂಜೀವಿನಿ:

" ಕನಿಷ್ಠದಲ್ಲಿ ಹುಟ್ಟಿಗೆ, ಉತ್ತಮದಲ್ಲಿ ಬೆಳೆದೆ,
ಪ್ರತ್ಯಕ್ಷ ಶರಣರ ಪಾದವಿಡಿದು ಗುರುವ ಕಂಡೆ
ಲಿಂಗವ ಕಂಡೆ ಜಂಗಮವ ಕಂಡೆ
ಪಾದೋದಕವ ಕಂಡೆ, ಪ್ರಸಾದವ ಕಂಡೆ
ಇಂತಿವರ ಕಂಡೆನ್ನ ಕಂಗಳಮುಂದಣ ಕತ್ತಲೆ ಹರಿಯಿತ್ತು
ಕಂಗಳ ಮುಂದಣ ಕತ್ತಲೆ ಹರಿಯಲೊಡನೆ

ಮಂಗಳದ ಮಹಾಬೆಳಗಿನೊಳಗೋಲಾಡಿ
ಸುಖಿಯಾದೆನಯ್ಯ"

ಆಕೆ ಧೈರ್ಯ ಸ್ಥೈರ್ಯಗಳ ಪುಣ್ಯದ ಪುತ್ಥಳಿ. ಸ್ವತಂತ್ರ್ಯವಾದ ವೈಚಾರಿಕ ವಿವೇಚನೆಯ ತಳಹದಿಯಮೇಲೆ ಧರ್ಮ ತತ್ತ್ವಗಳನ್ನು ಅತ್ಯಂತ ಸುಂದರವಾಗಿ ತರ್ಕಬದ್ಧವಾಗಿ ನಿವೇದಿಸಿದ ಮಹಾನುಭಾವೆ. ಇದೋ ಕೇಳಿ ಈ ವಚನ:

"ನರರ ಬೇಡೆನು! ಸುರರ ಹಾಡೆನು;
ಶರಣಂಗಳ ಹರಿಯಬಿಡೆನು;
ಕಾಮನ ಬಲೆಗೆ ಸಿಲ್ಕೆನು, ಮರವೆಗೊಳಗಾಗೆನು
ಪ್ರಣವ ಪಂಚಾಕ್ಷರಿಯ ಜಪಿಸಿಹೆನೆಂದು
ತನುವ ಮರೆದು ನಿಜಮುಕ್ತಳಾದೆನೆಯ್ಯಾ"

ಈ ಶರಣೆಯ ಮುತ್ತಿನಂತಹ ಮಾತುಗಳನ್ನು ನಮ್ಮ ಮಹಿಳೆಯರು ಗಮನಿಸಿ ಅನುಸರಿಸಿದರೆ ಅವರ ಅನೇಕ ಸಮಸ್ಯೆಗಳು ಪರಿಹಾರವಾಗಬಲ್ಲುವು.

ಕದಿರೆ ರೆಮ್ಮವ್ವೆ ನೂಲುವ ಕಾಯಕದವಳು. ತನ್ನ ಕಾಯಕಧರ್ಮವನ್ನೇ ಎತ್ತಿಕೊಂಡು ಹೀಗೆ ವಚನ ರಚನೆ ಮಾಡಿದ್ದಾಳೆ:

"ನಾ ತಿರುಹುವ ದಾಟಿಯ ಕುಲಜಾತಿಯ ಕೇಳಿರಣ್ಣಾ
ಅಡಿಯ ಹಲಗೆ ಬ್ರಹ್ಮ; ತೋರಣ ವಿಷ್ಣು;
ನಿಂದ ಬೊಂಬೆ ಮಹಾರುದ್ರ.
ರುದ್ರನ ಬೆಂಬಳಿಯವೆರಡು ಸೂತ್ರಕರ್ಣ
ಅರಿವೆಂಬ ಕದಿರು; ಭಕ್ತಿಯೆಂಬ ಕೈಯಲ್ಲಿ ತಿರುಹಲಾಗಿ
ಸುತ್ತಿತು ನೂಲು; ಕದಿರು ತುಂಬಿತ್ತು; ಗುಮ್ಮೇಶ್ವರಾ"

ಸತ್ಯಶುದ್ಧ ಕಾಯಕವನ್ನು ಶುದ್ಧ ಭಕ್ತಿಯಿಂದ ಮಾಡುವ ಪರಿಯಿದು. ಅಲ್ಲಿ ಸಂತೃಪ್ತಿ ಇದೆ, ನೆಮ್ಮದಿ ಇದೆ. ಗುಂಡಯ್ಯಗಳ ಪುಣ್ಯಸ್ತ್ರೀ ಕೇತಲದೇವಿಯ ವಚನವಿದು:

"ಹದ ಮಣ್ಣಲ್ಲದೆ ಮಡಕೆಯಾಗಲಾರದು.
ವ್ರತಹೀನನ ಬೆರೆಯಲಾಗದು.
ಬೆರೆದಡೆ ನರಕ ತಪ್ಪದು,
ಸ್ವಾನೊಲ್ಲೆ ಬಲ್ಲೆನಾಗಿ, ಕುಂಭೇಶ್ವರಾ"

ದುಷ್ಟರ ಸಂಗದಿಂದ ದೂರವಿರಬೇಕೆಂಬ ಸಂದೇಶವಿಲ್ಲದೆ.

ಬಾಚಿಕಾಯಕದ ಬಸವಯ್ಯಗಳ ಪುಣ್ಯಸ್ತ್ರೀ ಕಾಳವ್ವೆಯ ವಚನದಲ್ಲಿ ಇದೇ ಮಾತನ್ನು ಇನ್ನೊಂದು ಬಗೆಯಾಗಿ ನಿರೂಪಿಸಲಾಗಿದೆ.

" ಕೈತಪ್ಪಿ ಕೆತ್ತಲು ಕಾಲಿಗೆ ಮೂಲ,
ಮಾತು ತಪ್ಪಿ ನಡೆಯಲು ಬಾಯಿಗೆ ಮೂಲ,
ವ್ರತಹೀನನ ನೆರೆಯಲು ನರಕಕ್ಕೆ ಮೂಲ,
ಕರ್ಮಹರ ಕಾಳೇಶ್ವರಾ "

ಕೊಟ್ಟಣದ ಸೋಮಮ್ಮೆಯ ಮಾತುಗಳಿವು ;

" ಹದತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ.
ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ.
ಅರಿಯದುದು ಹೋಗಲಿ, ಅರಿದು ಬೆರೆಗೆನಾದಡೆ,
ಕಾದ ಕತ್ತಿಯಲ್ಲಿ ಕಿವಿಯ ಕೊಯ್ವರಯ್ಯ
ಒಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ "

ಅರಿಯದೆ ಮಾಡಿದುದು ತಪ್ಪಲ್ಲ; ಪಾಪವೂ ಅಲ್ಲ. ಅರಿದು ಮಾಡಿದರೆ ಮಹಾ ಪಾಪ.

ಅಕ್ಕಮ್ಮ ಇನ್ನೊಬ್ಬ ನಿಷ್ಠಾವಂತ ಶರಣೆ. ನೇರವಾದ ಮೊನಚಾದ ಮಾತುಗಳಲ್ಲಿಯೇ ತನ್ನ ಅನುಭವಗಳನ್ನು ಬಿತ್ತರಿಸಿದ್ದಾಳೆ.

" ವೇಷ ಎಲ್ಲಿರದು ?
ಸೂಳೆಯಲ್ಲಿ, ಡೊಂಬನಲ್ಲಿ, ಭೈರೂಪನಲ್ಲಿರದೆ ?
ವೇಷವ ತೋರಿ ಒಡಲ ಹೊರೆವ
ದಾಸಿ ವೇಶಿಯ ಮಕ್ಕಳಿಗೆ ನಿಜಭಕ್ತಿ ಎಲ್ಲಿಯದೊ ?

ನಿಷ್ಠುರವಾದ ಮಾತುಗಳಲ್ಲಿ ನಿತಾಂತ ಸತ್ಯವಡಗಿದೆ. ನಾಮದಲ್ಲಿ ಹೆಂಗಸಾದರೇನು, ಭಾವಿಸಲು ಗಂಡು ರೂಪವೆಂಬ ಮಹಾದೇವಿಯ ಮಾತಿಗೆ ಈ ಶರಣೆ ಸಾಕ್ಷಿ. ಆಡಂಬರದ ಡೊಂಬರಾಟವನ್ನು ವಿಡಂಬಿಸಿದ ರೀತಿ ಅರ್ಥ ಪೂರ್ಣ ; ಮನೋಜ್ಞ :

ನಿರಾಭಾರಿಗಳ ಲಕ್ಷಣಗಳನ್ನು ತಿಳಿಸಿದ ಅಮುಗೆ ರಾಯಮ್ಮ ಇನ್ನೊಬ್ಬ ಶ್ರೇಷ್ಠ ಶಿವಶರಣೆ.

" ಕಾದ ಹಾಲ ನೊಣ ಮುಟ್ಟ ಎಲ್ಲಿದೆ ?
ಕಿಚ್ಚಿನೊಳಗಣ ಗುಂಡ ಬೆಕ್ಕು ಮುಟ್ಟಬಲ್ಲುದೆ ?
ಈ ತ್ರಿವಿಧವನರಿದವರಿಗೆ ಹಿಂದೆ ಶಂಕೆಯಿಲ್ಲ ಮುಂದೆ ಭೀತಿಯಿಲ್ಲ
ಕಳಂಕು ಇಲ್ಲದೆ ಅಮುಗೇಶ್ವರಲಿಂಗವು ಅಪ್ಪಿಕೊಂಡಿತ್ತು "

ಗಾಂಗ ಸಾಮರಸ್ಯದ ಸವಿಸುಖದ ಸೊಬಗನ್ನು ತಿಳಿಯಾಗಿ ನಿವೇದಿಸಿದ ಮೋಳಿ
ು ಮಹಾದೇವಿಯಮ್ಮನ ಈ ವಚನ 'ಅರಿವೇ ಗುರು' ಎಂಬ ತತ್ವವನ್ನು ಎತ್ತಿ
ದಿದೆ.

"ಕೈಯಲ್ಲಿ ಜ್ಯೋತಿಯ ಹಿಡಿದು ಕತ್ತಲೆಯೆನಲೇತಕ್ಕೆ?
ಪಂಚಪರುಷ ಕೈಯಲ್ಲಿದ್ದು ಕೂಲಿಯ ಮಾಡಲೇತಕ್ಕೆ?
ಕುತ್ತು ನಿವೃತ್ತಿಯಾದವರಿಗೆ ಕಟ್ಟೋಗರದ ಹೊರೆಯ ಹೊರಲೇತಕ್ಕೆ?
ನಿತ್ಯ ಅನಿತ್ಯವ ತಿಳಿದು, ಮರ್ತ್ಯಕೈಲಾಸವೆಂಬುದು ಭಕ್ತರಿಗೆ ಯುಕ್ತಿಯಲ್ಲ.
ನಿಶ್ಚಯವ ತಾನರಿತು ಅತ್ತಣ ಇತ್ತಣ ಗೊತ್ತು ನಿಶ್ಚಯವಾಗಿ ನಿಂದಲ್ಲಿ
ಆ ಬಚ್ಚಬಯಲ ಬೆಳಗ ನಿನ್ನ ನೀನೆ ನೋಡಿಕೊ"

ಲ್ಯಾಣ ಕ್ರಾಂತಿಯಾದನಂತರ ಮುಂದೇನು ಮಾಡಬೇಕೆಂದು ದಿಕ್ಕುಗಾಣದಾದಾಗ
ಾಳಿಗೆಯ ಮಹಾದೇವಿಯಮ್ಮನವರು ತಮ್ಮ ಪತಿಗೆ ಸೂಕ್ತ ಸಲಹೆಗಳನ್ನಿತ್ತು
ಾರ್ಗದರ್ಶನ ಮಾಡಿದ್ದಾರೆ.

"ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ
ಚಿತ್ತಶುದ್ಧದಲ್ಲಿ ಕಾಯಕ ಮಾಡುವಲ್ಲಿ
ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿತಾನಾಗಿಪ್ಪಳು"

ಂಬ ಆಯ್ದಕ್ಕಿ ಲಕ್ಕಮ್ಮನ ಶ್ರದ್ಧೆ, ನಿಷ್ಠೆ, ಧೃಡತೆಯ ಮಹತ್ವವನ್ನು ಎತ್ತಿ ಹಿಡಿ
ದೆ.

ಮಹಾಶರಣೆ ನೀಲಾಂಬಿಕೆ ಇದ್ದೊಬ್ಬ ಮಗ ಇಲ್ಲದಾದ. ಜೀವಜೀವಾಳವಾದ
ತಿದೇವ ಬಸವಣ್ಣ ಲಿಂಗದೊಳಗಾದ ಆಕೆ ನುಡಿದ ಈ ಮಾತುಗಳು ಮನನೀಯ
ಾಗಿವೆ:

ನಾನಾರ ಸಾರವೆನೆಂದು ಚಿಂತಿಸಲೇತಕಯ್ಯ
ನಾನಾರ ಹೊಂದುವೆನೆಂದು ಭ್ರಮೆ ಪಡಲೇಕಯ್ಯ
ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯ
ಪರಿಣಾಮ ಮೂರ್ತಿ ಬಸವನ ರೂಪು ಕರಸ್ಥಳದಲ್ಲಿ.

ಬೆಳಗಿದ ಬಳಿಕ ಸಂಗಯ್ಯನ ಹಂಗ ನಮಗೇತಕೋ ಅಪ್ಪಣ್ಣ ಎಂದು ದಿವ್ಯ
ತತ್ವವನ್ನು ಜನಕ್ಕೆ ನೀಡಿದ್ದಾರೆ. ಬಸವಣ್ಣನ ಅಕ್ಕ ಚನ್ನಬಸವಣ್ಣನ ಮಹಾಮಾತೆ
ಅಕ್ಕನಾಗಮ್ಮನವರ ಸಾಂತ್ವನದ ಈ ಹಿತ ನುಡಿ ಬೆಂದು ಬಳಿದ ಜೀವಕ್ಕೆ ಜೀವ
ರಸ ನೀಡುತ್ತಿದೆ.

ಮನದೊಡೆಯ ಮಹಾದೇವ ಮನವ ನೋಡಿಹೆನೆಂದು
ಮನುಜರ ಕೈಯಿಂದ ಒಂದೊಂದು ನುಡಿಸುವನು
ಇದಕ್ಕೆ ಕಳವಳಿಸದಿರು ಮನವೆ, ಕಾತರಿಸದಿರುತ ನುಡಿ
ನಿಜವ ಮರೆಯದಿರು ಕಂಡಾ ನಿಶ್ಚಿಂತನಾಗಿರು ಮನವೆ.
ಬಸವಣ್ಣ ಪ್ರಿಯ ಚೆನ್ನಸಂಗಯ್ಯನು
ಬೆಟ್ಟದನಿತಪರಾಧವೆನು ಒಂದು ಬೊಟ್ಟನಲ್ಲಿ ತೊಡೆವನು

ಉರಿಲಿಂಗ ಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ, ಹುಟ್ಟಿನಿಂದ ಸ್ಪೃಶ್ಯ, ಸಂಸ್ಕಾರದಿ
ಮಹಾಶರಣೆ. ಆಕೆಯ ಹೃದಯದಿಂದ ಹೊರಬಂದ ಈ ವಚನ ವ್ರತಕ್ಕೆ ಕೊ
ಮಹತ್ವವನ್ನು ತಿಳಿಸುತ್ತದೆ.

ವ್ರತವೆಂಬುದು ನಾಯಕರತ್ನ; ವ್ರತವೆಂಬುದು ಸುಪ್ಪಾಣಿಯ ಮುತ್ತು
ವ್ರತವೆಂಬುದು ಜೀವಕಳೆ, ವ್ರತವೆಂಬುದು ಸುಯಿಧಾನ
ವ್ರತ ತಪ್ಪಲು, ಉರಿಲಿಂಗ ಪೆದ್ದಿಗಳರಸನೊಲ್ಲನವ್ವಾ"

ಸತ್ಯಕ್ಕೆ ಇನ್ನೊಬ್ಬ ದಿಟ್ಟಶರಣೆ, ಅವಳ ದೀರ ಪ್ರತಿಜ್ಞೆ ಇದು.

ಲಂಚವಂಚನಕ್ಕೆ ಕೈಯಾನದ ಭಾಷೆ,
ಬಟ್ಟೆಯಲ್ಲಿ ಹೊನ್ನ ವಸ್ತ್ರ ಬಿದ್ದಿದ್ದಡೆ
ಕೈಮುಟ್ಟಿ ಎತ್ತಿದನಾದಡೆ ಅಯ್ಯಾ ನಿಮ್ಮಾಣೆ
ನಿವಿಕ್ಕಿದ ಭಿಕ್ಷೆಯೊಳಗಿಪ್ಪೆನಯ್ಯಾ, ನಿಮ್ಮಾಣೆ
ಅರ್ಚನೆ ಪೂಜಿಸಿ ನೇಮದಲ್ಲಿ; ಮಂತ್ರ ತಂತ್ರ ನೇಮವಲ್ಲ:
ಧೂಪ ದೀಪಾರತಿ ನೇಮವಲ್ಲ,
ಪರಸ್ತ್ರೀ ಪರಧನ ಪರದೈವಂಗಳಿಗೆರಗದಿಪ್ಪುದೇ ನೇಮ

ಹೀಗೆ ವೈವಿಧ್ಯಮಯ ಬದುಕಿನ ಸಾಳಸಾರ್ವಸ್ವವನ್ನು ತಮ್ಮ ವಚನಗಳ ಮೂಲಕ
ಬಿಟ್ಟು ಹೋಗಿ ಮಹದುಪಕಾರ ಮಾಡಿದ್ದಾರೆ. ಶರಣೆಯರು ಬದುಕು ಇಂದಿಗೂ
ದಾರಿದೀಪವಾಗಿದೆ.

ಶರಣರು ದಾರಿ ತಪ್ಪಿದವರಲ್ಲ; ದಾರಿ ತಪ್ಪಿಸಿದವರೂ ಅಲ್ಲ, ದಾರಿ ತೋರಿದ
ವರು ಎಂಬುದನ್ನು ಮರೆಯಲಾಗದು.

# ಜ್ಞಾನವೇ ಆಂತರಿಕ ಸಾಕ್ಷಾತ್ಕಾರ

—ಜಿ. ಶಾರದರಾಜಶೇಖರ್,
847, 4ನೇ ಮುಖ್ಯರಸ್ತೆ, ವಿಜಯನಗರ, ಬೆಂಗಳೂರು.

ಪರಂಪರಾಗತವಾಗಿ ಬಂದ ಅಭ್ಯಾಸಗಳು, ಸಂಸ್ಥೆಗಳು ಇವುಗಳಿಗೂ ನಮ್ಮ ವೈಯಕ್ತಿಕ ಅಭಿಪ್ರಾಯ, ಭಾವನೆಗಳಿಗೂ ಇರುವ ಭೇದ ಗಾಢವಾದುದು. ನಮ್ಮ ಜಾಗ್ರತವಾಂಛೆಗಳು ರೂಢಮೂಲವಾದ ಪ್ರವೃತ್ತಿಗಳನ್ನು ವಿರೋಧಿಸುತ್ತವೆ. ಇವು ನಮ್ಮ ನಿಜವಾದ ವ್ಯಕ್ತಿತ್ವವನ್ನು ತೋರಿಸುವುದಿಲ್ಲ, ನಮ್ಮ ಸ್ವಭಾವವನ್ನು ತಿರಸ್ಕರಿಸು ವುದಕ್ಕಿಂತ, ದುಃಖವನ್ನೂ ವಿಯೋಗವನ್ನೂ ಅನುಭವಿಸಲೂ ನಾವು ಸಿದ್ಧವಾಗಿರ ಬೇಕು, ಎಂದರೆ ಅಭಿಪ್ರಾಯಗಳನ್ನು ಮಾರ್ಪಡಿಸಿಕೊಂಡರೆ ಸಾಲದು, ನಮ್ಮ ಭಾವ ಪುಂಜಗಳನ್ನೂ ಪುನರ್ವ್ಯವಸ್ಥೆ ಮಾಡಬೇಕು. ಬೇರೆಯವರ ಅಭಿಪ್ರಾಯಗಳನ್ನು ಅರ್ಥಮಾಡಿಕೊಳ್ಳಲು ನಮ್ಮ ಕಲ್ಪನೆಯನ್ನು ಮುಂದೆ ಬಿಡದೆ ಅವರ ದೃಷ್ಟಿಕೋನ ದಿಂದಲೇ ಕಾಣಬೇಕು.

ಒಬ್ಬರು ಇನ್ನೊಬ್ಬರ ದೋಷವನ್ನು ಸಹಿಸಿಕೊಳ್ಳಬೇಕು. ಅಡಚಣೆಗಳು ಒದಗಿ ದಾಗ ಪರಸ್ಪರ ನೆರವು ನೀಡಬೇಕು, ಜಗತ್ತಿಗೆ ಶಾಂತಿಯನ್ನು ಕೊಡುವ ಜವಾಬ್ದಾರಿ ನಮ್ಮಮೇಲಿದೆ. ಭಾವನೆಯು ಕೇವಲ ಆಲೋಚನೆಯಲ್ಲಿ ಮುಗಿಯುವುದಿಲ್ಲ ಜೀವದ ಮತ್ತು ಮನಸ್ಸಿನ ಅತ್ಯಂತ ಗಂಭೀರವಾದ ಪದರಗಳಲ್ಲಿ ಬೆಳೆಯುತ್ತವೆ. ಜ್ಞಾನವೇ ಆಂತರಿಕ ಸಾಕ್ಷಾತ್ಕಾರ ಎಂದು ಹಿಂದೂಗಳು ಹೇಳುವುದು ಕಾರಣವಿಲ್ಲದೆ ಅಲ್ಲ.

ನಾವು ಚೆಲ್ಲಾಟವಾಡುವ ಭಾವನೆಗಳು ಕೇವಲ ತೋರಾಣಿಕೆಗಳು, ಅವಕ್ಕೆ ಬುಡವಾಗಲಿ ಸತ್ತ್ವವಾಗಲಿ ಇರುವುದಿಲ್ಲ ಅವು ಸೃಜನಾತ್ಮಕವಾಗಬೇಕಾದರೆ ಜೀವದಲ್ಲಿ ಅವು ನಿಲ್ಲಬೇಕು. ನಮ್ಮ ಮುಂದೆ ಹಾದುಹೋಗುವ ಆದರ್ಶಗಳು ಸಂಕಲ್ಪಗಳು, ಸಲಹೆಗಳು ನಮ್ಮನ್ನು ಹಿಡಿಯುವಂತೆ ನಮ್ಮನ್ನು ಆಳುವಂತೆ, ನಮ್ಮನ್ನು ಪರಿವರ್ತಿಸು ವಂತೆ ನಮ್ಮನ್ನು ಪುನರುಜ್ಜೀವಿಸುವಂತೆ ಮಾಡಬೇಕು. ನಾವು ಅವುಗಳ ಜೀವಂತ ಪ್ರತಿಕೃತಿಗಳಾಗುವವರೆಗೂ ಅವು ನಮ್ಮನ್ನು ಹಿಡಿದಿಟ್ಟಿರುವಂತಾಗಬೇಕು. ಮುಕ್ಕಾಲು ಪಾಲು ಕಾಲ ನಾವು ವಿಷಯಗಳೊಂದಿಗೆ ಸಂಪರ್ಕ ಇಟ್ಟುಕೊಂಡಿರುವುದೇ ಇಲ್ಲ. ಅವು ಗಳನ್ನು ಪ್ರತಿನಿಧಿಸುವ ಮಾತುಗಳೊಂದಿಗೆ ನಮ್ಮ ವ್ಯವಹಾರವೆಲ್ಲ. ಅವುಗಳನ್ನು ಬಳಸಿ, ಅವುಗಳನ್ನೇ ಆಲೋಚಿಸಿ ಅವುಗಳಿಗೆ ಸತ್ತ್ವ ಕೊಡುತ್ತೇವೆ. ಈ ಬಳಕೆ, ಆಲೋಚನೆಯೇ ಸೃಜಕವಾದುದು, ನಾವು ಆತ್ಮ ಸೃಷ್ಟಿಯಿಂದ ವೈಯಕ್ತಿಕವಾದ ಗಂಭೀರ ಪರಿವರ್ತನೆಯಿಂದ ಜಗತ್ತಿನ ಪುನಃ ಸೃಷ್ಟಿಯನ್ನು ಮಾಡಬಹುದು.

ಹೆಗಲನ ಅಭಿಪ್ರಾಯದ ಪ್ರಕಾರ ನಾವು ನಮ್ಮ ಸಂವೇದನ ಶಕ್ತಿಯನ್ನು ಪೂರ್ಣವಾಗಿ ನಾಶಮಾಡಬೇಕೆಂದಲ್ಲ. ಅದನ್ನು ನಿಯಂತ್ರಿಸಬೇಕು, ಅಂದರೆ ನಾವು ಮೇಲ್ಮಟ್ಟದ ನೀತಿ ಜೀವನ ಮಾಡಲು ನಮ್ಮಲ್ಲಿನ ಪಶುಸ್ವಭಾವ ರೂಪವಾದ ವಿಷಯ ಲಂಪಟತೆಯನ್ನು ಅಳಿಸಬೇಕು. ಅದು ಅಳಿದರೆ ನಾವು ನೀತಿ ದೃಷ್ಟಿಯಿಂದ ಉಳಿಯುತ್ತೀವೆ, ಅಳಿಸುವುದೆಂದರೆ ನಮ್ಮಲ್ಲಿನ ಕೆಳಮಟ್ಟದ ಸುಖಾನುಭವಗಳನ್ನು ನಮ್ಮಲ್ಲಿಯೇ ಇರುವ ಮೇಲ್ಮಟ್ಟದ ಆತ್ಮಾನಂದ ಅನುಭವಕ್ಕಾಗಿ ದಂಡಿಸಬೇಕು, ನಮ್ಮಲ್ಲಿರುವ ಪಶುಸ್ವಭಾವನ್ವಿತ ಪ್ರವೃತ್ತಿಗಳನ್ನು, ಮೂಲ ಪೈಶಾಚಿಕ ಪ್ರವೃತ್ತಿಗಳನ್ನು ಅವುಗಳ ಮೂಲೋದ್ದೇಶಕ್ಕಲ್ಲದೆ ಉನ್ನತವಾದ ಬೇರೆಯ ಉದ್ದೇಶಕ್ಕೆ ಅಂದರೆ ಆತ್ಮ ಸಾಕ್ಷಾತ್ಕಾರಕ್ಕೋಸ್ಕರ ಬಳಸಿ ಅವುಗಳನ್ನು ಉದಾತ್ತೀಕರಿಸಬೇಕು.

ಪ್ರತಿಯೊಬ್ಬನೂ ಮೊದಲು ತನ್ನ ವ್ಯಕ್ತಿತ್ವವನ್ನು ಅರಿತುಕೊಂಡು ಆತ್ಮಸಾಕ್ಷಾತ್ಕಾರದಿಂದ ಅದನ್ನು ಉಳಿಸಿಕೊಳ್ಳಬೇಕು. ಇತರರೂ ತನ್ನ ಹಾಗೆಯೇ ಇತರರೂ ಕೂಡ ಎಂಬ ಭಾವನೆಯು ಮೂಡಬೇಕು.

ಬುನಾದಿ ಸರಿಯಾಗಿಲ್ಲದೆ ಚೆನ್ನಾಗಿರುವ ಮನೆಯನ್ನು ಕಟ್ಟಲಾಗುವುದಿಲ್ಲ. ಬುನಾದಿ ಭದ್ರವಾಗಿದ್ದು ಆಳವಾಗಿದ್ದರೆ ಗೋಡೆಗಳೂ ಕಂಬಗಳೂ ನಿಲ್ಲಬಲ್ಲವು. ವಿಷಯಗಳು ಜರುಗುವಾಗ, ನಮ್ಮ ಚೇತನಕ್ಕೆ ಯುಕ್ತವಾದ ಭಾವನೆಯನ್ನು ಆಯ್ದುಕೊಂಡು ಹೊಸ ಮಾರ್ಗಕ್ಕೆ ಪೂರ್ಣವಾಗಿ ನಮ್ಮನ್ನು ನಾವೇ ಬಿಟ್ಟುಕೊಡಬೇಕು, ನಮ್ಮಲ್ಲೇ ಹುದುಗಿರುವ ರೂಪ, ದೈವೀ ಸ್ವರೂಪ, ಆದರ್ಶವೊಂದಿರುತ್ತದೆ, ಅದನ್ನು ಕಂಡುಹಿಡಿದು ಬೆಳೆಸಬೇಕು.

ಎಲ್ಲಿಯವರೆಗೆ ಈವುಗೆ ನಮ್ಮ ಗುಪ್ತ ಸ್ವಭಾವದ ಅರಿವಿಲ್ಲವೋ ಅಲ್ಲಿಯುವರೆಗೆ ನಾವು ಪೂರ್ಣವಾಗಿ ನಾವಲ್ಲವೇ ಅಲ್ಲ, ನಮ್ಮಲ್ಲಿ ಪ್ರತಿಯೊಬ್ಬರೂ ವೀಣೆಯಿದ್ದಂತೆ, ತಂತಿಗಳ ಒತ್ತಡ ಸರಿಯಾಗಿಲ್ಲದಿದ್ದರೆ ಸುಶ್ರಾವ್ಯವಾದ ಸಂಗೀತ ಹೊರಹೊಮ್ಮುವುದಿಲ್ಲ, ಅವಿರತವಾದ ಅನ್ವೇಷಣೆ, ಹೊಂದಾಣಿಕೆಯಿಂದ ನಮ್ಮ ನಮ್ಮ ಒತ್ತಡ ಏನು ಎನ್ನುವುದನ್ನು ಅರಿತುಕೊಳ್ಳಬೇಕು

ಜೀವನದಲ್ಲಿ ಅಪಜಯಕ್ಕೆ ಭೌತಿಕ ಅಥವಾ ಮಾನಸಿಕ ಇಳಿವಂಗೆ ಸಾಮಾನ್ಯವಾಗಿ ಇರುವ ಕಾರಣಗಳಲ್ಲಿ ಮುಖ್ಯವಾದುದನ್ನು ವಿರೋಧ ಎಂದು ಮನಃಶಾಸ್ತ್ರಜ್ಞರು ಕರೆಯುತ್ತಾರೆ. ನಮ್ಮ ಜಾಗ್ರತ ಚೇತನದ ಕರ್ತವ್ಯಕ್ಕೂ ಸುಪ್ತ ಚೇತನದಲ್ಲಿ ಆಳವಾಗಿ ಅಡಗಿರುವ ಪ್ರವೃತ್ತಿಗಳಿಗೂ ವಿರೋಧ ಇರುತ್ತದೆ. ಅದರ ಅಭಿವ್ಯಕ್ತಿಯೇ ಕೆಲವು ರುಗ್ಣ ಭಾವನೆಗಳು. ಮಾನಸ ಚಿಕಿತ್ಸೆಗೆ ಫ್ರಾಯ್ಡನ ದೊಡ್ಡ ಕೊಡುಗೆಯೆಂದರೆ ಜಗತ್ತಿನ ದುಃಖಗಳಲ್ಲಿ ಅಧಿಕಪಾಲು ಸುಪ್ತ ಚೇತನದ ವಿರೋಧಗಳಿಂದ ಉಂಟಾಗುತ್ತದೆ. ಈ ವಿರೋಧವನ್ನು ಅರಿತು ಪರಿಹರಿಸಿದರೆ ಈ ದುಃಖವೂ ಹರಿಯುತ್ತದೆ.

ಧರ್ಮವೆಂದರೆ ಬರಿಯ ಪ್ರಾರ್ಥನೆ ವ್ರತಗಳಲ್ಲ. ಅದಕ್ಕಿಂತ ಹೆಚ್ಚಾಗಿ ಆ
ಸಂಗತಿಯ ಆ ಶಾಂತ ಕ್ಷಣಗಳಲ್ಲಿ ಧರ್ಮ ಇದೆ. ಇದರಿಂದ ನಮ್ಮ ಶೀಲ ಸಂಪೃತವಾ
ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ. ಆದರಿಂದ ನಮ್ಮ ಭಾವನೆಗಳನ
ಪವಿತ್ರಗೊಳಿಸುತ್ತೇವೆ, ಆತ್ಮದ ಬೀಜ ಬೆಳೆಯಲು ಬಿಡುತ್ತೇವೆ ನಮ್ಮ ಪ್ರಯತ್ನ
ಪ್ರಾಮಾಣಿಕತೆಯೇ ನಮ್ಮನ್ನು ಮುಂದೆ ಒಯ್ಯುತ್ತದೆ. ಇದರಿಂದ ಸುಪ್ತ ಜಾಗ್ರ
ಚೇನತಗಳೆರಡೂ ಕಲೆಯುವುವು.

ನಿಶ್ಚಿತ ವಿಜ್ಞಾನಗಳಿಗಿಂತ ಹೆಚ್ಚಾಗಿ ತತ್ವಶಾಸ್ತ್ರ, ಧರ್ಮ ಇವು ಮನುಷ್ಯ
ವ್ಯವಹಾರದಲ್ಲಿ ಗುರಿಯನ್ನೂ, ಮನುಷ್ಯನ ಮನಸ್ಸು ಇನ್ನೂ ಹೆಚ್ಚಿನ ಸಾಧನೆಗಳನ
ಪಡೆಯಲು ಅಗತ್ಯವಾದ ಏಕತಾನತೆಯನ್ನು ನಾವು ಕಂಡುಕೊಳ್ಳಲು ನೆರವಾಗುತ್ತವೆ

ಬೆಳೆಯಲು ಮೇಲೆ ಏರಲು, ತನ್ನ ಬಾಳನ್ನು ಪರಿವರ್ತಿಸಿಕೊಳ್ಳಲು ಅದರಿಂ
ಜಗತ್ತನ್ನು ಮತ್ತೆ ಸೃಷ್ಟಿಮಾಡಲು ಬೇಕಾದುದು ತರ್ಕವಲ್ಲ, ತಪಸ್ಸು, ಪ್ರಾರ್ಥನ
ಯಲ್ಲ ಧ್ಯಾನ, ಕಣ್ಣುಮುಚ್ಚಿ ಒಳಗೆ ನೋಡಿದರೆ ಧ್ಯಾನ ಅಥವಾ ತಪಸ್ಸು ಮಾಡಿದ
ನಮ್ಮ ಅಂತರಸ್ವಭಾವ ಬದಲಾಗುತ್ತದೆ.

ಒಳಗಿನ ಆತ್ಮನಲ್ಲೇ ಸ್ವರ್ಗವನ್ನು ಪಡೆಯುವುದು ಅಥವಾ ಕಳೆದುಕೊಳ್ಳುವುದು
ತಪಸ್ಸು ಸೃಜಕವಾದ ಶಕ್ತಿ ತಪೋ ಬ್ರಹ್ಮ

---

## ಮಹಾದೇವಿಯಕ್ಕನ ವಚನಗಳು

### ಸಂಸಾರ ಹೇಯ

ಊರ ಸೀರೆಗೆ ಅಸಗ ತಡಬಡಗೊಂಬಂತೆ ಹೊನ್ನೆನ್ನದು, ಹೆಣ್ಣೆನ್ನದು, ಮಣ್ಣೆ
ನ್ನದು ಎಂದು ನೆನೆನೆನೆದು ನಿಮ್ಮನರಿಯದ ಕಾರಣ ಕೆಮ್ಮನೆ ಕೆಟ್ಟೆನಯ್ಯ ಚನ್ನಮಲ್ಲಿ
ಕಾರ್ಜುನಯ್ಯ.

ಕಲ್ಲ ಹೊಕ್ಕರೆ ಕಲ್ಲ ಬರಿಸಿದೆ. ಗಿರಿಯ ಹೊಕ್ಕರೆ ಗಿರಿಯ ಬರಿಸಿದೆ. ಭಾಪು
ಸಂಸಾರವೆ! ಬೆನ್ನಿಂದ ಬೆನ್ನ ಹತ್ತಿ ಬಂದೆ. ಚನ್ನಮಲ್ಲಿಕಾರ್ಜುನಯ್ಯ ಇನ್ನೇವೆ
ನಿನ್ನೇವೆ?

ಆಲಿಸೆನ್ನ ಬಿನ್ನಪವ, ಪಾಲಿಸೆನ್ನ ಬಿನ್ನಪವ, ಪಾಲಿಸೆನ್ನ ಬಿನ್ನಪವ. ಏಕೆನ್ನ
ನೊರೆಯ ನೋಡೆನ್ನ ದುಃಖವ ಚನ್ನಮಲ್ಲಿಕಾರ್ಜುನಯ್ಯಾ?

# ...ನುವಿಗಿಳಿದ ಶಿವತಾನು ಇವರಿಗೊಲಿದು

## 24 ಭಕ್ತ ಅನಯುನಾರ

—ಹೆಚ್. ಜಿ. ರಾಧಾದೇವಿ

ಬೀದಿಲು ನಾಗಮ್ಮ ಮನೆ ಗಂಜ್ ರಸ್ತೆ. ರಾಯಚೂರು.

ಚೋಳ ದೇಶದಲ್ಲಿ ಮಂಗಳಪುರವೆಂಬ ಒಂದು ಊರಿದೆ. ಆ ಊರಿನಲ್ಲಿ ಅನಯುನಾರನೆಂಬ ಒಬ್ಬ ಶಿವಭಕ್ತನಿದ್ದ, ಪಂಚಾಕ್ಷರಿಯೆ ಅವನ ಉಸಿರಾಗಿತ್ತು. ಹುಟ್ಟಿದಂದಿನಿಂದಲೆ ಅವನಿಗೆ ಪಂಚಾಕ್ಷರಿ ಕರತಲಾಮಲಕವಾಗಿತ್ತು, ಪ್ರತಿದಿನ ಬೆಳಗಾಗೆದ್ದು ದೇವಾಲಯಕ್ಕೆ ಹೋಗಿ ಶಿವನಿಗೆ ವಂದನೆ ಸಲ್ಲಿಸಿ ಪಂಚಾಕ್ಷರಿ ಜಪಿಸುತ್ತಾ ಕೂಡುವನು ಅವನಿಗೆ ಸಂಸಾರ ಬಂಧನವಿಲ್ಲ, ಊರಿನಲ್ಲಿ ಯಾರ ಮನೆಯಲ್ಲಿ ಕರೆದು ಊಟಾ ಹಾಕಿದರೆ ಅಂದು ಊಟಾ ಮಾಡುವನು, ಇಲ್ಲದಿದ್ದರೆ ಉಪವಾಸವಿರುವನು.

ಹೀಗೆಯೇ ದಿನಾ ಕಳೆಯುತ್ತಿತ್ತು, ಶಿವನ ಪ್ರೇರಣೆಯಿಂದ ಅವನಿಗೊಂದು ವಿಷಯ ಹೊಳೆಯಿತು. ಏನೆಂದರೆ ಊರಿನವರಲ್ಲಿ ಹೆಚ್ಚು ಜನ ಗೋಸಂಪದ ಹೊಂದಿದವರು. ತಾನು ಅವರೆಲ್ಲರ ಗೋವುಗಳನ್ನು ಮೇಯಿಸಿಕೊಂಡಿರಬಾರದೇಕೆ? ಅಂದಿನಿಂದ ಪ್ರತಿದಿನ ಎಲ್ಲರ ಗೋವುಗಳನ್ನು ಅಟ್ಟಿಕೊಂಡು ಕಾಡಿನಲ್ಲಿ ಹಸಿರುಹುಲ್ಲು ಇರುವ ಜಾಗದಲ್ಲಿ ಬರುತ್ತಿದ್ದ.

ತಂಪಾಗಿ ನೀರು ಹರಿವ....ದಟ್ಟವಾಗಿ ನೆರಳು ಕವಿಯುವ ಮರಗಳ ಬಳಿ........ ಸೊಂಪಾಗಿ ಹುಲ್ಲು ಬೆಳೆವ ತಾಣದಲ್ಲಿ....ಹಸುಗಳನ್ನು ಕರೆತಂದು ಬಿಟ್ಟು, ತಾನು ಮರದ ನೆರಳಲ್ಲಿ ಕುಳಿತು ಬಿದಿರಿನಿಂದ ಕೊಳಲೊಂದನ್ನು ಮಾಡಿ ಅದರಲ್ಲಿ ಮನೋಹರವಾಗಿ ಪಂಚಾಕ್ಷರಿ ಮಂತ್ರವನ್ನು ರಾಗವಾಗಿ ನುಡಿಸುವನು.

ಆತನ ಮನೋಹರ ರಾಗಕ್ಕೆ ದೇವಲೋಕದ ಗಮಕಿಗಳು ಬೆರಗಾದರು. ಆತನ ಮನೋಹರ ಗಾನಕ್ಕೆ ರಾಗದೇವತೆಗಳು ಒಲಿದು ಅಲ್ಲಿ ವಿಜೃಂಭಿಸಿದರು. ಆತನ ಗಾನದಲ್ಲಿ ಸುಳಿವ ಶಿವಪಂಚಾಕ್ಷರಿ ಕೇಳಿ ಪುಳಕಿತರಾಗಲು ಋಷಿಗಳು ಗೋವಿನ ವೇಷ ಧರಿಸಿ ಅಲ್ಲಿ ಬಂದು ಮೇಯತೊಡಗಿದರು.

ಅನಯುನಾರನ ಪಂಚಾಕ್ಷರಿ ಕೊಳಲುಗಾನ ಶುರುವಾದಂತೆ ಹಸುಗಳು ಅವನ ಬಳಿ ಬಂದು–ಅವನ ಭುಜದ ಮೇಲೆ ತಲೆ ಇಟ್ಟು, ತೊಡೆಗಳ ಮೇಲೆ ತಲೆ ಇಟ್ಟು ಗಾನಾ ಕೇಳತೊಡಗುವವು. ಹುಲಿಗಳು ಬಂದು ಹಸುಗಳ ಕುತ್ತಿಗೆಯೊರಗಿ ಗಾನಾ ಕೇಳುವವು, ಹಸುಗಳು ಹುಲಿಗಳ ಭುಜಕ್ಕೊರಗಿ ಗಾನಾ ಕೇಳುವುವು, ಸಿಂಹ ಆನೆ

ಗಳು ಒಟ್ಟಿಗೆ ನಿಂತು ಗಾನಲಹರಿ ಸವಿಯುವುದು, ಹಾವು ಮುಂಗಲಿಯ ಬೆನ್ನಮೆ
ಹೆಡೆಯಾಡಿಸುತ್ತಾ ಗಾನಾ ಕೇಳುವುದು, ಹಾವಿನ ನೆರಳಲ್ಲಿ ಕಪ್ಪೆ, ಇಲಿ, ಗಿಳಿಗ
ಬಂದು ವೈಮರೆತು ಗಾನಾ ಕೇಳುವುವು. ಶಿವಪಂಚಾಕ್ಷರಿಯ ಮಹಿಮೆಯಿಂದ ಅ
ಗಳ ಪರಸ್ಪರ ವೈರ ಮಾಯವಾಗಿತ್ತು.

ಗಾನ ನುಡಿಸುವಾಗ ಅನಯನಾರನಾದರೊ ಇಡಿ ಪ್ರಪಂಚವನ್ನೆ ಮರೆಯ
ತ್ತಿದ್ದ, ತನ್ನ ಹೃತ್ಕಮಲದಲ್ಲಿ ಶಿವನ ನಿರ್ಮಲ ಮೂರ್ತಿಯನ್ನು ಸಾರೂಪ್ಯದಿಂ
ಚಿಂತಿಸುವ.

ಆ ಮೂರ್ತಿ ಬಹು ಹೊತ್ತು ಆತನ ಹೃದಯಕಮಲದೊಳಗೆ ಬೆಳಗಿ ನಂತ
ಮಾಯವಾಗುವುದು. ಆಗ ಆತ ಬಾಹ್ಯದಲ್ಲಿ ಎಚ್ಚರಗೊಳ್ಳುವನು.

ಹೀಗಿರುವಾಗ ಅನಯನಾರನ ಭಕ್ತಿಯಗಾನಸುಧೆ ಕೈಲಾಸಕ್ಕು ಹರಿಯಿತ
ಶಂಕರ ಜ್ಞಾನದೃಷ್ಟಿಯಿಂದ ನೋಡಿದ, ಓಹೊ! ಅನಯನಾರನ ಭಕ್ತಿ ಪಕ್ವವಾಗಿದ
ಆತನ ಕರ್ಮಬಂಧನ ಹರಿದುಹೋಗಿದೆ, ಇನ್ನು ಅವನನ್ನು ಭುವಿಯಲ್ಲಿರಲು ಬಿ
ಬಾರದು.

" ಹೋಗಿ ಕರೆದುಕೊಂಡು ಬರಬೇಕು " ಎಂದು ನಿಶ್ಚಯಿಸಿ ಆ ದಿ
ಕಾಡಿಗೆ ಬರುತ್ತಾನೆ, ಒಂದು ಹೂಬಿಟ್ಟ ಕಕ್ಕೆಯ ಮರದಮೇಲೆ ಕುಳಿತುಕೊಳ್ಳುತ್ತಾನ
ಅನಯನಾರ ಎಂದಿನಂತೆ ಬಂದು ಕಕ್ಕೆಯ ಮರದ ಕೆಳಗೆ ಕೊಡಲೆತ್ತಿಸಿದ. ಅದ
ಕಣ್ಣರಿಯದಿದ್ದರು ಕರುಳರಿಯದೆ....? ಎಂಬಂತೆ ಶಿವಾ ಆ ಮರದಮೇಲೆ ಅದೃಷ
ನಾಗಿ ಕುಳಿತಿದ್ದರು ಭಕ್ತನಿಗೆ ತನ್ನ ಭಕ್ತಿಯ ಮಹಿಮೆಯಿಂದ ಮರದಮೇಲೆ ವಿಶೇಷ
ಮೋಹಾ ಉಂಟಾಯಿತು. ಮರವನ್ನೆ ಶಿವನೆಂದು ಭಾವಿಸಿ ಹೊಗಳತೊಡಗಿದ
ಕೆಂಜಡೆಯನ್ನು ಸುತ್ತಿದಂತೆ ಪಲ್ಲವಿಸುತ್ತಿರುವನೆ ನಾಗಾಭರಣಧಾರಿಯೆ....ನಂದಿವಾಹ
ನನೆ ಉಮೆಯನ್ನು ಎಡದ ತೊಡೆಯಮೇಲೆ ಕೂಡಿಸಿಕೊಂಡಿರುವನೆ ಕಪ್ಪಾದ ಕೊರಳ
ನವನೆ....ಗಜಚರ್ಮಧಾರಿಯೆ....ಹುಲಿ ಚರ್ಮ ಹೊದ್ದವನೆ....ಸೂರ್ಯ, ಚಂದ್ರ
ಅಗ್ನಿಯರೆ ನೇತ್ರವಾಗುಳ್ಳವನೆ....ಭಸ್ಮಭೂಷಿತನೆ....ಕೋಟಿ ಸೂರ್ಯರ ಕಾಂತಿಯುಳ್ಳ
ವನೆ....ಕೋಟಿ ಶರಚ್ಚಂದ್ರರ ತೇಜ ಧಿಕ್ಕರಿಪ ಮನೋಹರ ನಗೆಯುಳ್ಳವನೆ...."

ಆತನ ಬಣ್ಣನೆಯ ಭಕ್ತಿಯ ಕಾವು ಎಂತಿತ್ತೊ? ಅಲ್ಲಿದ್ದ ಮರವೆ ಮಾಯ
ವಾಗಿ ಮಾಯವಾಗಿ ನಿಂತಿದ್ದ ಶಿವಾ ಆತನು ಬಣ್ಣಿಸಿದಂತೆ ಬಯಲಾದ, ಮರವನ್ನು
ನೋಡಿ ತನ್ಮಯನಾಗಿ ಶಿವರೂಪ ಬಣ್ಣಿಸಿದರೆ ಮರ ಮಾಯವಾಗಿ ಶಿವನೆ ಒಡಮೂಡಿದ
ನೆಂದು ಭಕ್ತ ಓಡಿಬಂದು ಶಿವನನ್ನಪ್ಪಿ–ನನಗಾಗಿ ನಿನ್ನ ಮನೋಹರವಾದ ಕೈಲಾಸ
ತೊರೆದು ಈ ಘೋರ ಕಾನನಕ್ಕೇಕೆ ಬಂದೆ ತಂದೆ? ನನ್ನ ಭಕ್ತಿ ನಿನಗೆ ಹಿಂಸೆ
ಯಾಯಿತು " ಎಂದು ಅಳಲುತ್ತಾನೆ, ಶಿವ ಅವನನ್ನು ಸಂತೈಸಿ ತನ್ನೊಡನೆ ಅವನನ್ನು
ಕೈಲಾಸಕ್ಕೆ ಕರೆದೊಯ್ಯುತ್ತಾನೆ.

# ಸಂಯಮನ

—ಕನ್ನಡ ಕವಿ ಕಾಳಿದಾಸ

"ಸುತ್ತಿ ಸುತ್ತಿ ಬಂದಡಿಲ್ಲ, ಲಕ್ಷಗಂಗೆಯ ಮಿಂದಡಿಲ್ಲ
ತುಟ್ಟ ತುದಿಯ ಮೇರುಗಿರಿಯ ಮೆಟ್ಟಿ ಕೂಗಿದಡಿಲ್ಲ.
ನಿತ್ಯನೇಮದಿಂದ ತನುವ ಮುಟ್ಟಿಕೊಂಡಡಿಲ್ಲ
ನಿಚ್ಚಕ್ಕೆ ನಿಚ್ಚ ನೆನೆವ ಮನವ
ಅಂದಂದಿಗೆ ಅತ್ತಲಿತ್ತ ಹರಿವ ಮನವ ಚಿತ್ರದಲ್ಲಿ ನಿಲ್ಲಿಸಬಲ್ಲಡೆ,
ಬಚ್ಚಬರಿಯ ಬೆಳಗು ಗುಹೇಶ್ವರ ಲಿಂಗವು!"

—ಅಲ್ಲಮಪ್ರಭುದೇವರು.

ಯಾರು ಪ್ರಕೃತಿಯ ಸಹಜ ಧರ್ಮವಾದ ಅದರ ಗುಣಗಳಿಗೆ ಮಾರು ಹೋಗಿ ಲ್ಲವೊ, ಹಾಗೆಯೇ ಈ ಪ್ರಕೃತಿಯ ಅಧೀನರಾಗಿರದೆ ಅದರ ಗುಲಾಮರಾಗಿ ಉಳಿದಿ ಲ್ಲವೋ ಅಂತಹ ಧೀರ ಪುರುಷರೇ ಆತ್ಮಸಂಯಮಿಗಳಾಗಿ ಇರಬಲ್ಲರು. ಇಂತಹ ಆತ್ಮಸಂಯಮವುಳ್ಳ ಭಗವದ್ಭಕ್ತರು ಆತ್ಮೋನ್ನತಿಯ ಪಥದಲ್ಲಿ ಚರಿಸುತ್ತ ಸ್ವಾತ್ಮ ಬಲದಿಂದ ಇಡಿಯ ಸೃಷ್ಟಿಯನ್ನೇ ಹಿಡಿದು ನಿಲ್ಲಿಸಬಲ್ಲರು. ಈ ಬಗೆಯ ಶಕ್ತಿಯು ಮಹಾನ್ ವ್ಯಕ್ತಿಯ ಪರಮ ಸಾಧನೆಯ ಸಿದ್ಧಿಯ ಸಂಕೇತವಾಗಿದೆ. ಹಾಗೆಯೇ ಇದು ಭಕ್ತ-ಭಗವಂತರ ನಡುವಣ ಭಕ್ತಿಯ ಬೆಸುಗೆಯಾಗಿದೆ. ಅದರಂತೆ 'ಶಿವಾರ್ಪಣ' ಭಾವನೆಯ ಪ್ರತೀಕವಾಗಿದೆ.

ಸಹಜ ಆತ್ಮಸಂಯಮವು ಸ್ವಭಾವವಾಗಿದ್ದ ಸಂತ-ಶರಣರು ತಮ್ಮ ಈ ಮನಸ್ಸಿನ ಸ್ಥಿತಿಯನ್ನು ಕಾಪಾಡಿಕೊಂಡವರಾಗಿರುತ್ತಾರೆ. ಎಂತಹ ಕಷ್ಟದ ಸನ್ನಿವೇಶಗಳಲ್ಲೂ ಇವರು ಚಂಚಲಚಿತ್ತರಾಗುವುದಿಲ್ಲ, ದುಡುಕುವುದಿಲ್ಲ.

ಮಾನವನ ಮನೋಧರ್ಮಕ್ಕನುಗುಣವಾಗಿ ಹರಿದು ಹೋಗುವ ಈ ಮನಸ್ಸಿನ ಸಹಸ್ರಾರು ಮುಖಗಳನ್ನು ಸಾಮಾನ್ಯ ಮನುಜನಂತೆ, ಈ ಆತ್ಮಸಂಯಮಿಗಳಾದ ಮಹಾನುಭಾವರು ಮುಂದಕ್ಕೆ ಹೋಗಗೊಡುವುದಿಲ್ಲ.

ಈ ಮಹಾನುಭಾವಿಗಳು ತಮ್ಮ ಮನಸ್ಸನ್ನು ಸ್ವಾಧೀನಪಡಿಸಿಕೊಂಡಿರುತ್ತಾರೆ. ಅದರಂತೆ ಇವರು ಪ್ರಕೃತಿಯ ಮೇಲೆ ಪ್ರಭುತ್ವವನ್ನು ಸಾಧಿಸಿರುತ್ತಾರೆ.

ಭಕ್ತನು ತನ್ನ ಸೃಷ್ಟಿಯ ಕಾರ್ಯದಲ್ಲಿ ಬಂದುದೆಲ್ಲವನ್ನೂ 'ಶಿವಪ್ರಸಾದ' ಭಾವ ಯಿಂದ ಸ್ವೀಕರಿಸುತ್ತ ನಿತ್ಯವೂ ತೃಪ್ತನಾಗಿರುವನು. ಆನಂದ ಮನಸ್ಕನಾಗಿರು ವನು. ಶಾಂತಭಾವ ಸಮುದ್ರನಾಗಿರುವನು. ಈತ ದ್ವೈತಿಯಂತೆ ಜಗತ್ತನ್ನು ತನಗಿಂತ ಅನ್ಯವೆಂದು ಭಾವಿಸಲಾರ. ಅದಕ್ಕೆ ಪ್ರತಿಯಾಗಿ ತನ್ನ ಪ್ರೀತಿ-ವಾತ್ಸಲ್ಯ ಗಳ ಸುರಿಮಳೆಗರೆಯುತ್ತ ಈ ವಿಶ್ವವೆಲ್ಲವನ್ನೂ ತನ್ನ ಸ್ವರೂಪದಲ್ಲಿಯೇ ನೋಡು ವನು-ವಿಶ್ವಮಾನವನಾಗಿ.

ಮಾನವನು ಮನಸ್ಸನ್ನು ಸ್ವಾಧೀನಪಡಿಸಿಕೊಳ್ಳುವುದೆಂದರೆ, ಇದು ಸಾಮಾನ್ಯ ವಿಷಯವಲ್ಲ. ಮಹಾ ಸಾಧನೆಯಲ್ಲಿನ ಮೇರುಗಿರಿಯ ಮಹೋನ್ನತ ಹಂತವಾಗಿದೆ.

---



---

## ಮಹಾದೇವಿ ಅಕ್ಕನ ವಚನಗಳು

### ಸಂಸಾರ ಹೇಯ

ಕಲ್ಲ ಹೊಕ್ಕರೆ ಕಲ್ಲ ಬಿರಿಸಿದೆ. ಗಿರಿಯ ಬಿರಿಸಿದೆ. ಭಾಪು ಸಂಸಾರವೇ!
ಬೆನ್ನಿಂದ ಬೆನ್ನ ಹತ್ತಿ ಬಂದೆ. ಚನ್ನಮಲ್ಲಿಕಾರ್ಜುನಯ್ಯ ಇನ್ನೇವೆನಿನ್ನೇವೆ?

# "ದೇವದೂತ" ಡಾಕ್ಟರ

—ಕನ್ನಡ ಕವಿ ಕಾಳಿದಾಸ

ಬ್ರಹ್ಮ ಅನಂತ ಜೀವಕೋಟಿಯನ್ನು ಸೃಷ್ಟಿಸಿ ಭೂಮಿಯ ಬಾಳಿಗೆ ಕಳಿಸು ವನು. ಎಂಭತ್ತು ನಾಲ್ಕು ಲಕ್ಷ ಜೀವರಾಶಿಯೊಳಗಣ ಪ್ರಧಾನ ಜೀವಿಯೆಂದರೆ ಮಾನವನೇ. ಈ ಮಾನವ ಪ್ರಾಣಿಯಲ್ಲಿ ಕುರುಡರು, ಕುಂಟರು, ಹೆಳವರು, ಮೂಕರು ಇನ್ನೂ ಹಲವು ಬಗೆಯ ಅಂಗವಿಕಲರು ಹೀಗೆ ಇವರೆಲ್ಲರೂ ಕೂಡ ಆ ಬ್ರಹ್ಮಸೃಷ್ಟಿಯ ಮೂಲಕವಾಗಿಯೇ ಬಂದವರು.

ಬ್ರಹ್ಮನು ತನ್ನ ಬಹುಕುಶಲತೆಯ ಕಲಾತ್ಮಕ ಕೃತಿಯೆಂಬಂತೆ ಈ ಮನುಜ ದೇಹವನ್ನು ಯಂತ್ರೋಪಾದಿಯಲ್ಲಿ ರಚಿಸಿ ಎಲುಬಿನ ಹಂದರ ಹಾಕಿಸಿ ನರಗಳೆಂಬ ದಾರಗಳಿಂದ ಸುತ್ತಿಸಿ, ಮಧ್ಯೆ ರಕ್ತಮಾಂಸಗಳೆಂಬ ರಸದೆಣ್ಣೆಯಿರಿಸಿ, ಹೃದಯ ಕಮ ಲದಲ್ಲಿ ಜೀವನೆಂಬ ಆತ್ಮನನ್ನು–ದೇಹಯಂತ್ರ ನಡೆಯಿಸುವ–ಚಾಲಕ (ಡ್ರೈವರ್) ನನ್ನಾಗಿ ನಿಯಮಿಸಿ ಹಾಗೆಯೇ ಈ ಯಂತ್ರವನ್ನು ಚೆನ್ನಾಗಿ ನಡೆಯಿಸಿಕೊಂಡು ಹೋಗುವಂತೆ ಆಜ್ಞೆ ವಿಧಿಸಿ–ಮತ್ತೆ ಮತ್ತೆ ವಿಶೇಷವಾಗಿ : ನೀನು, ಸೃಷ್ಟಿಸಿದ ನಾನು ಕ್ಷಿಸ ನಾರಾಯಣನು–ಲಯಗೊಳಿಸ ರುದ್ರನು ಸಹಿತವಾಗಿ ದೇವತೆಗಳೂ ಮಾನ ರೂ ಒಟ್ಟಿನಲ್ಲಿ ಸರ್ವದೇಹಗಳಲ್ಲಿನ ಆತ್ಮರು ಪರಮಾತ್ಮನ ಅಂಶೀಭೂತರು–ಪರ ಮಾತ್ಮನ ಸಂಸ್ಫುರಣಗಳೇ ಈ ಎಲ್ಲರ ಆತ್ಮರುಗಳಾಗಿದ್ದಾರೆ– ಅನಂತ ರೂಪಗಳ ಈ ಜೀವಕೋಟಿಯೆಲ್ಲ ಒಬ್ಬ ದೇವನ ಪ್ರತಿಕೃತಿಗಳಾಗಿವೆ ಎಂಬೀ ತತ್ತ್ವರಹಸ್ಯವನ್ನು ನೆ ಗುಟ್ಟಾಗಿ ಚಾಲಕ ಆತ್ಮನಿಗೆ ಕಿವಿಯಲ್ಲಿ ಹೇಳಿ ಬ್ರಹ್ಮ ಹೊರಟು ಹೋದ ನ್ನ ಸೃಷ್ಟಿಕಾರ್ಯಕಾರಿ

ಆಮೇಲೆ ಈ ಮಾನವ ದೇಹಗಳೆಂಬೀ ಯಂತ್ರಗಳು ಸರಿಯಾಗಿ ಸಾಗಿವೆಯೋ ಲ್ಲವೋ ಎಂಬುದನ್ನು ಪರೀಕ್ಷಿಸಿ, ಏನಾದರೂ ಅದಕ್ಕೆ ರೋಗರುಜಿನಗಳೆಂಬ ತೊಡ ಕುಂಟಾದಾಗ, ಆ ದೇಹಯಂತ್ರಗಳು ಸರಿಯಾಗಿ ನಡೆಯುವಂತೆ ಮಾಡಲು, ದೇವ ದೂತನೋಪಾದಿಯಲ್ಲಿ ಡಾಕ್ಟರ ಜನರನ್ನು ಸೃಷ್ಟಿಸಿ ಬ್ರಹ್ಮಭೂಮಿಗೆ ಕಳುಹಿಸಿದ ವರನ್ನು. ಅಂತಯೇ ಕೈತಪ್ಪಿ ಕುಂದು ಕೊರತೆಗಳಿದ್ದರೆ, ಅವುಗಳನ್ನು ತುಂಬ ಪ್ರಮಾಣಿಕವಾಗಿ, ಪ್ರಾಂಜಲವಾಗಿ ಪವಿತ್ರ ಭಾವನೆಯಿಂದ ಸರಿಪಡಿಸಿ, ಆರೋಗ್ಯ ಗಿಸಿ ನನ್ನ ಸಹಕಾರ್ಯದರ್ಶಿಗಳಾದ ನೀವು ಡಾಕ್ಟರುಗಳೆಲ್ಲ "ದೇವದೂತ" ಬ ಕೀರ್ತಿಯನ್ನು ಸಂಪಾದಿಸಿರಿ–ಹೋಗಿ ಬನ್ನಿರಿ–ಎಂದ ಆ ಬ್ರಹ್ಮ.

ಈ ಬ್ರಹ್ಮದೇವನ ಮೇಲಿನ ಆದೇಶದಂತೆ ನಮ್ಮ ಆತ್ಮೀಯ ಡಾಕ್ಟರರಾದ ಆರ್. ಎಲ್. ಅಡಿಗರವರು ತುಂಬ ಕಾರ್ಯತತ್ಪರರಾಗಿದ್ದರು. ಒಂದು ದಿನ ವಿಷ ಪ್ರಾಶನ ಮಾಡಲಾದ ಒಬ್ಬ ಹೆಣ್ಣುಮಗಳನ್ನು ಈ ಡಾಕ್ಟರಲ್ಲಿಗೆ ತಂದಿದ್ದರು. ಈ ಸ್ತ್ರೀಯಳು ವಿಷಪ್ರಾಶನ ಮಾಡಿ ಇಪ್ಪತ್ತೆರಡು ಗಂಟೆಯಾಗಿತ್ತು. ಕೇಸ್ ಕೈಮೀರಿ ಹೋಗಿತ್ತು. ಆದರೂ ಡಾ|| ಅಡಿಗರು ತಕ್ಷಣ ಇಂಜೆಕ್ಷನ್ ಒಂದನ್ನು ಕೊಟ್ಟು ಈ ಕೇಸನ್ನು ಫಾಯಿಲ್ ಮೇಲೆ ತೆಗೆದುಕೊಂಡರು. ಹಾಗೆಯೇ ತಮ್ಮ ಪ್ರಯತ್ನ ವನ್ನು ಮುಂದುವರಿಸಿದರು. ಗಂಟೆಗೊಂದರಂತೆ ಇಪ್ಪತ್ತೆರಡು ಇಂಜೆಕ್ಷನ್ ಆ ಸ್ತ್ರೀಯ ಳಿಗೆ ಕೊಟ್ಟರು. ಈ ಅವಧಿಯಲ್ಲಿ ಆ ಹೆಣ್ಣುಮಗಳು ಸ್ವಲ್ಪ ಸ್ಮೃತಿದಳೆದಂತೆ ಹಾಗೆಯೇ ಮರುಕ್ಷಣದಲ್ಲಿ ಮತ್ತೆ ಸ್ಮೃತಿ ತಪ್ಪಿ ಮರುಕಳಿಸಿ ಬಿದ್ದಂತೆ ಮಾಡುತ್ತಿ ದ್ದಳು. ಅಲ್ಲಿ ಈ ಸನ್ನಿವೇಶವನ್ನು ನೋಡುತ್ತಲಿದ್ದ ನಾವುಗಳು ಗಾಬರಿಯಾಗಿ ಡಾಕ್ಟರನ್ನು ಕೇಳಿದೆವು. "ಈಕೆ ಬದುಕುವುದಿಲ್ಲವೇ ? ಹೇಗೆ" ಎಂದು. ಅದಕ್ಕೆ ಅಡಿಗರು: "ವಿಷವು ಮೈಯೆಲ್ಲ ವ್ಯಾಪಿಸಿಕೊಂಡಿದೆ ಆದರೂ ನೋಡೋಣ" ಎಂದರು. ಇನ್ನೊಂದು ಇಂಜೆಕ್ಷನ್ ಕೈಯನರದಲ್ಲಿ ಬಹಳ ಜಾಣತನದಿಂದ ಮಾಡಿದರು. ಮುಂದೆ ಸುದೈವದಿಂದ ಅರ್ಧಗಂಟೆಯೊಳಗಾಗಿ ಈ ಹೆಣ್ಣು ಮಗಳು ಪೂರ್ಣ ಚೇತ ರಿಸಿಕೊಂಡು ಎದ್ದು ಕುಳಿತಳು. ಈಗ ನಮಗೆಲ್ಲ ತುಂಬ ಸಂತೋಷ.

ಪೂರ್ಣ ಅನುಭವಿಗಳೂ ಮಹಾಮೇಧಾವಿಗಳೂ ದೇಹತಂತ್ರಜ್ಞ ಡಾಕ್ಟರರೂ ಆದ ಅಡಿಗರವರನ್ನು " ದೇವದೂತ " ಡಾಕ್ಟರರೆಂದು ಸಾರ್ಥಕನಾಮದಿಂದ ನಾವೆಲ್ಲ ಕೊಂಡಾಡಿದೆವು.



ಸಿದ್ಧಗ

# ಹಸಿವು ನೀಗಿಸುವ ಹಸಿರೆಲೆ

—ಪ. ರಾಮಕೃಷ್ಣಶಾಸ್ತ್ರಿ
"ಶಿವಶಕ್ತಿ ನಿಲಯ" ಅಂಚೆ: ಪುಚ್ಚನ 574295 (ದ.ಕ.)

ಮನುಷ್ಯ ಕುಲ ಎದುರಿಸುತ್ತಿರುವ ಸಮಸ್ಯೆಗಳಲ್ಲಿ ಪ್ರೋಟೀನ್‌ನ ಕೊರತೆಯೂ ಒಂದು. ಕ್ಷಣ ಕ್ಷಣಕ್ಕೂ ಏರುತ್ತಿರುವ ಮನುಷ್ಯ ಕುಲಕ್ಕೆ ಆಹಾರವೊದಗಿಸುವುದೇ ಅಸಾಧ್ಯವಾಗಿರುವಾಗ ಈ ಪೋಷಕ ದ್ರವ್ಯದ ಪೂರೈಕೆಯೂ ಕಷ್ಟವಾಗಿದೆ. ಹಿಂದುಳಿದ ದೇಶಗಳಲ್ಲಿ ಇದೊಂದು ದೊಡ್ಡ ಸಮಸ್ಯೆ ಪ್ರೋಟೀನನ್ನು ಒದಗಿಸಬೇಕಾದ ಆಹಾರಗಳು ಮೊಟ್ಟೆ, ಮಾಂಸ, ಹಾಲು, ತರಕಾರಿಗಳು ಮತ್ತು ಅನೇಕ ಬಗೆಯ ಧಾನ್ಯಗಳೇ ಮುಖ್ಯವಾಗಿವೆ. ಕೇವಲ ತರಕಾರಿಗಳನ್ನೇ ತಿನ್ನುವ ಮಾನವಂಗೆ ನೂರರಲ್ಲಿ ಐದರಷ್ಟು ಪ್ರೋಟೀನು ಸಿಗಲಾರದು.

ಇದೀಗ ವಿಜ್ಞಾನಿಗಳು ಮನುಷ್ಯನಿಗೆ ಪುಷ್ಕಳವಾಗಿ ಪ್ರೋಟೀನು ಕೊಡುವ ಮೂಲವನ್ನು ಕೊಡುವುದರಲ್ಲಿ ಸಫಲರಾಗಿದ್ದಾರೆ. ಪ್ರಪಂಚದ ಎಲ್ಲಾ ಆಹಾರಗಳಿಗೂ ಕಾರಣ ಹಸುರೆಲೆಗಳೇ. ಈ ಎಲೆಗಳನ್ನು ತಿಂದು ಪ್ರಾಣಿಗಳು ಮಾಂಸ, ಹಾಲು, ಮೊಟ್ಟೆಗಳನ್ನು ಪೂರೈಸುತ್ತವೆ. ಎಲೆಗಳಿಂದ ಪರಿವರ್ತನೆ ಹೊಂದಿದ ಆಹಾರಕ್ಕಾಗಿ ಕಾಯುವ ಬದಲು ಎಲೆಗಳನ್ನೇ ಪ್ರೋಟೀನ್ ಆಗಿ ಯಾಕೆ ತಯಾರಿಸಬಾರದು? ಎಂದು ವಿಜ್ಞಾನಿಗಳು ಕೇಳುತ್ತಾರೆ.

ನಾವು ಕಸವೆಂದು ಎಸೆದುಬಿಡುವ ಹಸಿರೆಲೆ ಪ್ರೋಟೀನಿನ ಅಗಣಿತ ನಿಧಿಯಾಗಿದೆ. ದೇಹಕ್ಕೆ ಅಪಾಯಕಾರಿಯಲ್ಲದ ಎಲ್ಲಾ ಬಗೆಯ ಹಸಿರೆಲೆಗಳು, ಧಾನ್ಯದ ಗಿಡಗಳ ಎಲೆ, ಕಬ್ಬು, ನುಗ್ಗೆ ಹಾಗೂ ಶೇಂಗಾ ಗಿಡದ ಎಲೆ, ಮೆಕ್ಕೆಜೋಳದ ಎಲೆ, ಕೋಸು, ಕುದುರೆ ಮಸಾಲೆ ಎಲೆ ಮುಂತಾದವುಗಳಲ್ಲಿ ಶೇಕಡಾ ೨೫ ರಿಂದ ೩೦ ರಷ್ಟು ಪ್ರೋಟೀನು ತಯಾರಿಕೆಗೆ ಈ ಎಲೆಗಳೇ ಅತ್ಯುಪಯುಕ್ತ. ಪ್ರಾಣಿಗಳು ತಿಂದ ಎಲೆಗಳಲ್ಲಿ ಶೇಕಡ ೧೦ ರಿಂದ ೩೦ ರಷ್ಟು ಮಾತ್ರ ಪ್ರೋಟೀನ್ ಆಗಿ ಪರಿವರ್ತನೆ ಹೊಂದಿ ಉಳಿದುದೆಲ್ಲಾ ಹಾಳಾಗುವುದಾದರೆ ಎಳೆಯ ತೊಪ್ಪಲುಗಳಿಂದ ಶೇ. ೬೦-೭೦ ಪ್ರೋಟೀನು ಅಂಶ ತೆಗೆದು, ಉಳಿದುದನ್ನು ಪ್ರಾಣಿಗಳಿಗೆ ತಿನ್ನಿಸಲು ಸಾಧ್ಯವುಂಟು.

ಒಂದು ಎಕರೆ ನೆಲದಲ್ಲಿ ಹುಲ್ಲು ಬೆಳೆಸಿದರೆ ೩ ಕ್ವಿಂಟಾಲು ಪ್ರೋಟೀನು ಸಿಗಬಹುದು. ಅಷ್ಟು ಸ್ಥಳದಲ್ಲಿ ಗೋಧಿ ಬೆಳೆಸಿದರೆ ೧೩೫ ಕೆ.ಜಿ, ಅವರೆ ಬೆಳೆಸಿದರೆ ೧೮೫

ಕೆ ಜಿ. ಪ್ರೊಟೀನು ಸಿಗಬಹುದಾದರೆ ಹಸಿರೆಲೆಯ ಗಿಡಗಳನ್ನು ಬೆಳೆಸಿಕೊಂಡರೆ ೬೦೦ ಕಿಲೋಗ್ರಾಂ ಪ್ರೊಟೀನು ಲಾಭವಾಗುತ್ತದೆ. ಇಷ್ಟೇ ಸ್ಥಳದಲ್ಲಿ ಜಾನುವಾರುಗಳ ಮೇದರೆ ಸಿಗುವ ಹಾಲು ೪೫ ಕೆ.ಜಿ. ಮತ್ತು ಮಾಂಸ ೨೫ ಕೆ.ಜಿ ಗಳಷ್ಟು ಪ್ರೊಟೀನನ್ನು ಪೂರೈಸಬಹುದು. ಆದ್ದರಿಂದ ಯಾವುದು ಲಾಭವೋ ಊಹಿಸಿಕೊಳ್ಳಿ.

ಬ್ರಿಟನ್ನಿನ ರೋಥಾಮ್ಸ್ಟೆಡ್ ಪ್ರಯೋಗಶಾಲೆಯಲ್ಲಿ ಹಸಿರೆಲೆ ಹುಲ್ಲುಗಳ ಪ್ರೊಟೀನ್‌ನಲ್ಲಿ ಕಸ ಸಿಗದಂತೆ, ತಿನ್ನಲು ಒಗ್ಗುವಂತೆ ಮಾಡಲು ೩೦ ವರ್ಷಗಳ ಪ್ರಯೋಗದಿಂದ ಸಾಧ್ಯವಾಗಿದೆ. ದಿನಕ್ಕೆ ನೂರಾರು ಟನ್ ಹಸಿರೆಲೆಯಿಂದ ಆಹಾರ ಸಿದ್ಧಪಡಿಸಿಕೊಡುವಂಥ ಯಂತ್ರಗಳು ತಯಾರಾಗಿವೆ. ಕಲ್ಕತ್ತಾ ವಿಶ್ವವಿದ್ಯಾನಿಲಯದ ವಿಜ್ಞಾನ ವಿಭಾಗದಲ್ಲಿ ನೀರುಬಳ್ಳಿ ಅಥವಾ ವಾಟರ್ ಹೈಸಿಂಥ್‌ನಿಂದ ಪ್ರೊಟೀನು ತೆಗೆಯುವ ವಿಧಾನ ರೂಪಿತವಾಗಿದೆ. ಈ ನೀರುಬಳ್ಳಿ ಕೇರಳ, ಪಶ್ಚಿಮ ಬಂಗಾಳ ಮತ್ತು ಅಸ್ಸಾಮ್‌ಗಳಲ್ಲಿ ಬತ್ತದ ಗದ್ದೆಗಳಲ್ಲಿ ಹಾನಿಕಾರಕವಾಗಿ ಬೆಳೆಯುತ್ತದೆ. ನದಿನೀರಿನ ನಾಲೆಗಳಲ್ಲಿ ಬೆಳೆದು ಪ್ರವಾಹವನ್ನು ತಡೆಯುತ್ತದೆ. ಇಂಥ ಉಪದ್ರಕಾರಕ ಕಳೆಯಿಂದ ಪ್ರೊಟೀನು ತೆಗೆಯಲು ವೆಚ್ಚ ಅತ್ಯಲ್ಪವಾಗಿದೆ. ನಿರುಪಯುಕ್ತ ಎಂದು ಎಸೆಯಲಾಗುತ್ತಿದ್ದ ಬಟಾಣಿಗಿಡದ ತೊಪ್ಪಲಿನಿಂದ ಸುಲಭವಾಗಿ ಪ್ರೊಟೀನು ತೆಗೆಯಬಹುದೆಂದು ಬ್ರಿಟನ್ ಸಿದ್ಧಪಡಿಸಿದೆ.

ಯಾವುದೇ ಹಸಿರೆಲೆಯನ್ನು ಒರಳು ಕಲ್ಲಿನಲ್ಲಿ ಶೇ. ೨-೩ ಕಾರ್ಬೋನೇಟ ನೊಂದಿಗೆ ಅರೆದು, ಅರಿವೆಯಲ್ಲಿ ಸೋಸುತ್ತಾರೆ. ಸೋಸಿದಾಗ ಸಿಗುವ ಚರಟ ಉತ್ತಮ ಪಶು ಆಹಾರ. ಸೋಸಿದ ದ್ರವಕ್ಕೆ ಹುಣಸೆಹಣ್ಣಿನ ರಸ, ಲಿಂಬೆರಸ ಅಥವಾ ಹೈಡ್ರೊಕ್ಲೋರಿಕ್ ಆಮ್ಲ ಬೆರೆಸಿ ಹುಳಿ ಬರಿಸಿದ ಮೇಲೆ ಬಟ್ಟೆಯಲ್ಲಿ ಜರಡಿ ಹಿಡಿದಾಗ ಪ್ರೊಟೀನ್ ಬಟ್ಟೆಯಲ್ಲೆ ಉಳಿಯುತ್ತದೆ. ಕಡು ಹಸಿರು ವರ್ಣದಲ್ಲಿ ದಪ್ಪಗೆ ಉಳಿಯುವ ಇದನ್ನು ಬಾಳೆಹಣ್ಣು, ಮಸಾಲೆಯೊಂದಿಗೆ ಬೆರಸಿ ತಿನ್ನಬಹುದು. ಕಲ್ಕತ್ತಾ ವಿಶ್ವವಿದ್ಯಾನಿಲಯದ ಸಂಶೋಧನಾ ವಿಭಾಗದವರು ಈ ಪ್ರೊಟೀನನ್ನು ಸಿಹಿ ತಿಂಡಿಗಳಲ್ಲಿ, ಬಟಾಟೆ ಪಲ್ಯ, ಪಕೋಡಾ, ಸಾರು, ಹುಳಿ, ಪೂರಿ, ಚಪಾತಿಗಳೊಂದಿಗೆ ಬೆರಸಿ ತಿನ್ನಬಹುದೆನ್ನುತ್ತಾರೆ. ಇಂಗ್ಲೆಂಡಿನಲ್ಲಿ ಈ ಪ್ರೊಟೀನು ಬಹು ಜನಪ್ರಿಯವಾಗಿದೆ.

ಹಸಿರೆಲೆಯಿಂದ ತೆಗೆದ ಪ್ರೊಟೀನ್‌ಗೆ ಲೈಸೀನ್ ಮತ್ತು ಮೆಥಿಯೋನ್ ರಾಸಾಯನಿಕ ಬೆರೆಸಿದರೆ ಮಾಂಸದಿಂದ, ಹಾಲಿನಿಂದ ಸಿಗುವಷ್ಟೇ ಪ್ರೊಟೀನ್ ಸಿಗುತ್ತದೆ. ಈ ರಾಸಾಯನಿಕ ಬೆರೆಯದಿದ್ದರೆ ಅದರಲ್ಲಿ ಧಾನ್ಯಗಳಲ್ಲಿರುವುದಕ್ಕಿಂತ ಸ್ವಲ್ಪ ಹೆಚ್ಚು ಅಮೈನೋ ಆಮ್ಲ ಸಿಗಬಹುದು. ಜಮೈಕಾದಲ್ಲಿ ಪ್ರೊಟೀನ್ ಅಭಾವದಿಂದ ಬಳಲುತ್ತಿದ್ದ ೫ ರಿಂದ ೨೬ ತಿಂಗಳೊಳಗಿನ ಮಕ್ಕಳಲ್ಲಿ ಕೆಲವರಿಗೆ ಹಾಲಿನ ಪುಡಿಯಲ್ಲಿ ಮೆಕ್ಕೆಜೋಳದ ಎಲೆಯ ಪ್ರೊಟೀನನ್ನು ಶೇ. ೫೭ ರಿಂದ ೪೦ ರಷ್ಟು ಕೊಡಲಾಯಿತು. ಆಗ

(34 ನೇ ಪುಟ ನೋಡಿ)

# ಹ್ಮಾಂಡದ ಬಾಳಿನಲ್ಲಿ

"ಕನ್ನಡಕವಿ ಕಾಳಿದಾಸ"

—ಶ್ರೀ ಮೋಟಗಿ ಮಲ್ಲಿಕಾರ್ಜುನ, ಅಥಣಿ

ಹಿಂದಣ ಜನ್ಮದಲ್ಲಿ ದೇವಲೋಕವಾಸಿಯಾಗಿದ್ದ ಸ್ವಾತ್ಮ, ಗಂಧರ್ವ ಲೋಕ
ಯೂ ಸಂಚರಿಸುತ್ತ ಅಲ್ಲಿನ ದೇವಗಾನಗಂಗಾಮೃತವನ್ನು ಮನದಣಿ ಸವಿಯುತ್ತ
ದ್ದ–ಆಗ ದಿವ್ಯದೇಹಧಾರಿಯಾಗಿದ್ದ. ಆಗ ನನ್ನ ಆತ್ಮ ಒಮ್ಮೆ ಈಶ್ವರಾಜ್ಞೆಗನುಸಾರ
ಗಿ ಭೂಮಿಯ ಬಾಳಿನಲ್ಲಿ ಬೆಳಗಬೇಕಾಗಿ ಬಂದಿತು. ಭಗವಂತನ ಇಚ್ಛೆಯಂತೆ
ಆತ್ಮ ಈ ಸೃಷ್ಟಿಯಲ್ಲಿ ಜನ್ಮ ತಳೆಯಿತು. ಮಾನವ ದೇಹಧರಿಸಿದ ಆತ್ಮ ತನ್ನ
ೋಗತಿಗನುಸಾರವಾಗಿ, ಪೃಥ್ವಿಯಲ್ಲಿನ ಪರಮೋಚ್ಚವಾದ ಜೀವನವನ್ನೇ ಮುಕ್ತಿ
ಧನೆಗಾಗಿ ಮೊದಲಿಗೇನೆ ಆಯ್ಕೆ ಮಾಡಲಾಗಿತ್ತು. ಅಂತೆಯೇ ಆತ್ಮನ ಅನುಭೂತಿಗೆ
ಮಧ್ಯಬಿಂದುವಾದ ಕೇಂದ್ರ ಕ್ಷೇತ್ರವೆನಿಸಿದ ಪವಿತ್ರ ಅವನಿಯೇ ಅನುಕೂಲ
ಯಿತು.

ಕವಿಯ ಜೀವನವೆಂಬ ಸೃಷ್ಟಿಯಮೇಲೆ ಆಕಾಶದಲ್ಲಿರುವ ಸಪ್ತಗ್ರಹಗಳೋಪಾದಿ
ಲ್ಲಿ ಸಪ್ತ ಸಂತತಿಗಳು ಕಾಣಿಸಿಕೊಂಡವು. ನಿಮಿತ್ತಮಾತ್ರ ನಾವು ಸತಿ-ಪತಿಗಳೀ
ರು ರಾಹು–ಕೇತುಗಳಂತೆ ಇದ್ದು–ಇವೆಲ್ಲ ನವಗ್ರಹವೆನಿಸಿದುವು

ಹೀಗೆ ಇದೆಲ್ಲ ಲೋಕ ಜೀವನದ ಒಂದು ಒಗಟಿನ ವೃತ್ತಾಂತವಾಯಿತಾದರೂ
ಈ ಎಲ್ಲದರಿಂದ ಹೊರಬಂದುನಿಂದ [1]"ಸ್ವಾತ್ಮಸೂರ್ಯ" ಬ್ರಹ್ಮಾಂಡವಿಹಾರಿ
ಾಗಿ ಸಹಜ ಸ್ವರ್ಗಾದಿಲೋಕಗಳನ್ನು ಬೆಳಗುತ್ತಲಿದ್ದ ಕಾಲಕ್ರಮದಂತೆ.

ಮಾನವನ ಭೂಮಿಯ ಬಾಳಿನ ಕಾಲಗಣನೆಗನುಸಾರವಾಗಿ, ಆತ್ಮ ಈ ದೇಹ
ದುನಿಂದು, ಇಂದಿಗೆ 55 ವರ್ಷಗಳಿಗೂ ಮೇಲ್ಪಟ್ಟಕಾಲ ಕಳೆದುಹೋಗಿದೆ. ಭಗ
ತನಿಗೆ ಸಂಪೂರ್ಣವಾಗಿ ತನ್ನನ್ನೇ ತಾನು ಸಮರ್ಪಿಸಿಕೊಂಡ ಸ್ವಾತ್ಮ, ಸಾಂತ್ವನ
ರಯಸ್ಥನಾಗಿ ನಕ್ಕು ನಲಿಯುತ್ತಾನೆ. ದೇಹದ ಆ ಸುಖ-ದುಃಖಗಳನ್ನು ದೇಹದ
ಟ್ಟಿಗೆ ಬಿಟ್ಟುಕೊಟ್ಟು, ದೂರ ಬಹುದೂರದಲ್ಲಿ ಆತ್ಮ ಭಗವತ್ ಚಿಂತನೆಯಲ್ಲಿ ಭಕ್ತಿ
ವಲೋಕದಲ್ಲಿ ಉಲ್ಲಸಿತನಾಗಿರುತ್ತಾನೆ.

ಸಂಸಾರದ ಮೋಹ ಬಂಧನವು ತಿಲಮಾತ್ರವೂ ಸೋಂಕದ ಈ "ಧರ್ಮಜ್ಞ"
ಗೆ ಸದಾ "ಸ್ವಾತ್ಮಸೂರ್ಯ" ಕಾಲಕ್ರಮದಂತೆ ಯುಗಾಂತರಗಳಿಂದಲೂ ಬೆಳಗು
ಿ ಸಾಗಿರುವನು

1 ಟೀ : ಒಂದು "ಅಳಿದು ಕೂಡುವ ಯೋಗ", ಇನ್ನೊಂದು "ಉಳಿದು ಕೂ ಯೋಗ"ವನ್ನು ಹೊಂದಿದವರು. "ಸ್ವಾತ್ಮ ಸೂರ್ಯ" ಈ "ಉಳಿದು ಕೂಡುವ ಯೆ ದಲ್ಲಿರುವನು.

ಒಂದು ದೃಷ್ಟಾಂತ:-ದಿ : 1-9-1983 ರ ಬೆಳಗಿನ ಜಾವ ಒಂದು ದಿವ್ಯ ದೃಷ್ ವಾಯಿತು. "ಸ್ವಾತ್ಮಸೂರ್ಯ" ಉಳಿದು ಕೂಡುವ ಯೋಗದಲ್ಲಿದ್ದಾನೆ-ಈಗ "ಕನ್ನಡ ಕಾಳಿದಾಸ"ನ ಹೃದಯ ಕಮಲ ಮಧ್ಯದಲ್ಲಿದ್ದ ಶಿವಯೋಗಿ ಕರುಣಾಂತರಂಗದಿಂದ ಅಲ್ಲಿಯೇ ದಿವ್ಯ ದೀಕ್ಷೆಯನ್ನಿತ್ತವರು-ಈ ಪೂರ್ವದಲ್ಲಿಯೇ. ಇದು ಈಗ ಹೇ ದೃಷ್ಟಾಂತಕ್ಕಿಂತಲೂ ಬಹಳ ಹಿಂದಿನ ಅಂದರೆ ನನ್ನ ಬಾಲ್ಯಾವಸ್ಥೆಯಲ್ಲಿನ ಸಂಗ ಹೇಳಿಕೆ.

ಇದೇ ತಿಳಿಸಲಾದ ದಿ : 1-9-1983 ರ ಬೆಳಗು ಮುಂಜಾವದ ಸ್ವಪ್ನ. ಅರ್ಥ ಶಿವಯೋಗಿಗಳವರ ಪ ತಿರೂಪರಾದ ಜಂಗಮ ತಿಲಕ ಮರುಳ ಶಂಕರದೇವರು ತಮ್ಮ ದಿನದ ಕಾಯಕದ ಕಜ್ಜದ ದುರುಡೆಯನ್ನು ಕೈಯಲ್ಲಿಯೇ ಹಿಡಿದುಕೊಂಡು ಬಸ ಬಾವಿಯ ಮುಂದಣ ಮಾರ್ಗದಿಂದ ಪೂರ್ವಾಭಿಮುಖವಾಗಿ ಅತ್ತಲಿಂದ ಬರುತ್ತಲಿದ್ದಾ ಶ್ರೀಗಳವರನ್ನು ಕಂಡು ಕವಿ ಭಕ್ತಿ ಪ್ರಣಾಮಗಳನ್ನು ಸಲ್ಲಿಸುತ್ತಿದ್ದಂತೆ ಅವನಿಗೆ ಪೂ ತಮ್ಮ ದುರುಡೆಯಲ್ಲಿಂದ ಎರಡು ಪೇಡೆಗಳನ್ನು ಹೊರತೆಗೆದು ತಮ್ಮ ಅಮೃತಹಸ್ತಗ ನೀಡಿ ಆಶೀರ್ವದಿಸುವರು. ಹೀಗೆ ಇಂತಹ ಸನ್ನಿವೇಶಗಳಿಗೆ ಕವಿಯ ಪುಣ್ಯಭಾಗ್ಯ ವ ವಲ್ಲದೆ ಗುರುಕೃಪಾ ವಿಶೇಷ ಸೌಭಾಗ್ಯಯೋಗವೆಂದು ಹೇಳಬಹುದು. ಅಂತೆಯೇ ಮ ಸ್ವಭಾವದ ಲೀಲಾಮೂರ್ತಿಗಳಾದ ಶ್ರೀ ಮರುಳ ಶಂಕರದೇವರ ಮಹಿಮೆಗಳು ರ ಮಯವಾಗಿವೆ. ದೇವರ ಮಹಿಮೆ ಆ ದೇವರೇ ಬಲ್ಲ ಶ್ರೀಗಳವರ ಹಲವಾರು ಮ ಗಳಲ್ಲಿ ಇದೊಂದು ಪ್ರಸಾದ ಮಹಿಮೆಯೆಂದು ಹೇಳಬಹುದು. —(ಶಿ

---

(32ನೇ ಪುಟದಿಂ

ಹಾಲಿನ ಹುಡಿಯಿಂದಲೇ ಬೆಳೆದ ಮಕ್ಕಳು ದಿನಕ್ಕೆ ೨೩೪ ಮೈಕ್ರೊಗ್ರಾಂ ಪ್ರೊಟೀನ ಅರಗಿಸಿಕೊಂಡರೆ ಎಲೆಯ ಪ್ರೊಟೀನ್ ಸೇವಿಸಿದ ಮಕ್ಕಳು ೨೦೩ ಮೈಕ್ರೊಗ ಪ್ರೊಟೀನ್ ಅರಗಿಸಿಕೊಂಡುವು. ಹಸಿರೆಲೆಯ ಪ್ರೊಟೀನ್ ಹಾಲಿಗೆ ಎಷ್ಟು ಸಮ ವಾಗಿದೆ.

ಅಮೇರಿಕದಲ್ಲಿ ನಿರರ್ಥಕವೆಂದು ತಿಪ್ಪೆಗೆಸೆಯುವ ೫೦ ಲಕ್ಷ ಟನ್ ಸೊಪ್ಪಿನಿ ಸುಲಭದಲ್ಲಿ ಒಂದೂಕಾಲು ಲಕ್ಷ ಟನ್ ಪ್ರೊಟೀನ್ ಸಿಗಬಹುದೆಂದು ಗೊತ್ತಾಗಿ ಭಾರತದಲ್ಲಿ ಗೆಣಸು, ಕಬ್ಬು, ಬಾಳೆ, ಸೆಣಬು, ಕಸಾವಾ, ಬೀಟ್ ಮೊದಲ ಅನೇಕ ಸಸ್ಯಗಳ ಎಲೆಗಳನ್ನು ಹಾಳು ಮಾಡಲಾಗುತ್ತಿದೆ. ಇದನ್ನು ಪೋಷಣಾಂಶ ಉತ್ಪಾದನೆಗೆ ಬಳಸುವುದರಿಂದ ನಮ್ಮ ದೇಶದ ಪ್ರೊಟೀನ್ ಕೊರತೆ ನೀಗಬಹು ಬ್ರಿಟನಿನ ತಜ್ಞರು ನೂರು ಬಗೆಯ ಸಸ್ಯಗಳನ್ನು ಪರಿಶೀಲಿಸಿ, ಯಾವ ಎಲೆಯ ಅಧಿಕ ಪೋಷಕಾಂಶ ಸಿಗಬಹುದೆಂದು ಗುರುತಿಸಿದ್ದಾರೆ. ಹಸಿರೆಲೆಯಿಂದ ಸುಲಭವಾ ಪ್ರೊಟೀನ್ ತೆಗೆಯುವ ತಂತ್ರ ನಮ್ಮ ಕೈಗೆಟುಕಿದೆಯಲ್ಲದೆ ಇದರಿಂದ ಒಳ್ಳೆಯ ಹಾ ಹಿಂಡುವ ಯಂತ್ರಗಳೂ ಸಿದ್ಧವಾಗಿವೆ.

# ಚುಂಬಕ ಚಿಕಿತ್ಸಾ ಪದ್ಧತಿ

—ಬಿ. ಸುಬ್ರಾಯ ಅಡಿಗ
ನಿವೃತ್ತ ಉಪಾಧ್ಯಾಯರು, ಸಂಡೂರು, ಬಳ್ಳಾರಿ-583119

"ಅಜ್ಞಾತ"

ಮನುಷ್ಯನ ಆರೋಗ್ಯ ಲಾಭಕ್ಕಾಗಿ ಬೇರೆ ಬೇರೆ ಚಿಕಿತ್ಸಾ ಪದ್ಧತಿಗಳು ಬಳಕೆಯಲ್ಲಿವೆ. ಇಷ್ಟಾದರೂ ಮನುಷ್ಯನ ದೈಹಿಕ ವೇದನೆ ಹಾಗೂ ದು:ಖದುಮ್ಮಾನ ಈಗಲೂ ಉಳಿದುಕೊಂಡಿವೆ. ಇವುಗಳಲ್ಲಿ ಎಲ್ಲೋ ಒಂದಿಷ್ಟು ಅಪೂರ್ಣತೆ ಇರುವುದೇ ಇದಕ್ಕೆ ಕಾರಣ. ದಿನನಿತ್ಯವೂ ಹೊಸ ಹೊಸ ಆವಿಷ್ಕಾರ ಹೊಂದುತ್ತಿರುವ ಔಷಧಿಗಳಲ್ಲಿ ತಕ್ಷಣ ಸಮಾಧಾನ ಒದಗಿಸುವ ಅಲೋಪಥಿ, ಹೋಮ್ಯೋಪಥಿ ಹಾಗೂ ಕಷಾಯುಗಳಿಂದಾರಂಭಿಸಿ ಕಾಯಿಲೆಗಳನ್ನೇ ಬೇರು ಸಹಿತ ಕಿತ್ತೆಸೆಯುವ ಆಯುರ್ವೇದ ಪದ್ಧತಿಯ ಔಷಧಿಗಳಿದ್ದರೂ ಅನೇಕ ವೇಳೆ ಇವಾವುದಕ್ಕೂ ಬಗ್ಗದ ಕಾಹಿಲೆಗಳು ತಲೆದೋರುತ್ತವೆ. ಆಗ ಮನುಷ್ಯ ಸರಳ ಹಾಗೂ ಸಹಜ ಚಿಕಿತ್ಸಾಪದ್ಧತಿಯ ಶೋಧಕ್ಕೆ ತೊಡಗುತ್ತಾನೆ. ಅಂತಹ ಸರಳ ಚಿಕಿತ್ಸಾ ಪದ್ಧತಿಯ ರೂಪದಲ್ಲಿ ಚುಂಬಕ (ಅಯಸ್ಕಾಂತ) ಚಿಕಿತ್ಸೆ ಪ್ರಖ್ಯಾತವಾದದು.

ಪ್ರಾಚೀನ ಕಾಲದಲ್ಲಿ ಚುಂಬಕ ಚಿಕಿತ್ಸಾ ಪದ್ಧತಿ ತುಂಬಾ ಪ್ರಸಿದ್ಧವಾಗಿತ್ತು. ಅಥರ್ವ ವೇದದಲ್ಲಿ ಇದರ ಉಲ್ಲೇಖ ದೊರೆಯುತ್ತಿದೆ. ಆಯುರ್ವೇದ ಗ್ರಂಥಗಳಲ್ಲೂ ಇದರ ಗುಣಧರ್ಮಗಳ ಪ್ರಸ್ತಾಪ ಬರುತ್ತದೆ. ಆಧುನಿಕ ಕಾಲದಲ್ಲಿ ವಿದೇಶಗಳಲ್ಲಿ ಈ ಪದ್ಧತಿಯ ಬಗ್ಗೆ ಸಾಕಷ್ಟು ಶೋಧ ನಡೆಯಿತು. ಇದನ್ನು ಡಿಲ್ಲಿಯ ಡಾಕ್ಟರ್ ಠಕ್ಕರ್ ಹಾಗೂ ಹೀರಾಲಾಲ್ ಬನ್ಸಲ್ ಪ್ರಚಾರ ಪಡಿಸಿದರು.

ಪ್ರಾಕೃತಿಕ ಸಾಧನಗಳಿಂದ ಮನುಷ್ಯನಲ್ಲಿ ಚುಂಬಕಶಕ್ತಿ ಉಂಟಾಗುತ್ತದೆ. ಆದರೆ ವೈಯಕ್ತಿಕ ಭಿನ್ನತೆಗಳಿಂದಾಗಿ ಇದು ಹೆಚ್ಚು ಕಡಿಮೆ ಆಗುತ್ತದೆ. ಯೋಗ ಕ್ರಿಯೆಗಳ ಮೂಲಕ ಈ ಶಕ್ತಿಯನ್ನು ವಿಕಾಸಗೊಳಿಸಿ ಯೋಗಿಗಳು ಅಲೌಕಿಕಸಿದ್ಧಿ ಪಡೆಯುತ್ತಾರೆ. ಪ್ರದೂಷಣದಿಂದಾಗಿ ಮನುಷ್ಯನ ಪ್ರಾಕೃತಿಕ ಚುಂಬಕಶಕ್ತಿ ಕುಗ್ಗುತ್ತದೆ. ಆಗ ಪ್ರತ್ಯಕ್ಷ ಚುಂಬಕದ ಮಾಧ್ಯಮದಿಂದ ಅವನಿಗೆ ಶಕ್ತಿ ಒದಗಿಸುವುದೇ ಚುಂಬಕ ಚಿಕಿತ್ಸೆ.

ಪ್ರತಿಯೊಂದು ಶಕ್ತಿಶಾಲಿ ಚುಂಬಕದಿಂದಲೂ ಒಂದು ವಿಧದ ಸೂಕ್ಷ್ಮತರಂಗಗಳು ಹೊರಡುತ್ತವೆ. ಅವು ಸ್ನಾಯುಮಂಡಲ, ಜ್ಞಾನತಂತು ಹಾಗೂ ರಕ್ತ

ಸಂಚಾರದ ಮೇಲೆ ಪ್ರಭಾವ ಬೀರುತ್ತವೆ. ಚುಂಬಕೀಯ ತರಂಗಗಳ ಪರಿಣಾಮ ವಾಗಿ ದೇಹದಲ್ಲಿ ಒಂದು ಹೊಸ ಶಕ್ತಿ ಉಂಟಾಗುತ್ತದೆ. ಅದು ಆರೋಗ್ಯ ಪುನಃ ಸ್ಥಾಪನೆಗೆ ನೆರವಾಗುವುದು.

ದೇಹದ ಬೇರೆ ಬೇರೆ ನಾಡಿಗಳಲ್ಲಿ ಹರಿಯುವ ರಕ್ತದಲ್ಲಿ ಕಬ್ಬಿಣದ ತತ್ವವಾದ ಹೆಮೊಗ್ಲೋಬಿನ್ ಇರುತ್ತದೆ. ಅದರ ಮೇಲೆ ಚುಂಬಕ ತರಂಗಗಳು ಪ್ರಭಾವ ಬೀರುವುವು. ರಕ್ತ ಸ್ವಚ್ಛ, ತೆಳು ಹಾಗೂ ಪ್ರವಾಹಮಯವಾಗಿರುವಂತೆ. ಚುಂಬ ಕವು ಸ್ನಾಯುಮಂಡಲಕ್ಕೆ ಶಕ್ತಿಕೊಡುವುದರ ಜತೆಗೇ ಕೆಂಪುರಕ್ತಕಣಗಳನ್ನು ಹೆಚ್ಚಿ ಸುವುದು. ಆಗ ಸಹಜವಾಗಿಯೇ ರೋಗನಿರೋಧಕ ಶಕ್ತಿ ಹೆಚ್ಚುತ್ತದೆ. ಮತ್ತು ಮನುಷ್ಯ ನೀರೋಗಿಯೆನಿಸುತ್ತಾನೆ, ಸ್ವಸ್ಥಜೀವನ ಪಡೆಯಲು ಚುಂಬಕ ಚಿಕಿತ್ಸಾ ಪದ್ಧತಿಯನ್ನಾಶ್ರಯಿಸಬಹುದು.

ಆಯುರ್ವೇದದಲ್ಲೂ ಚುಂಬಕದ ಗುಣಧರ್ಮಗಳ ಉಲ್ಲೇಖ ದೊರೆಯುತ್ತದೆ. ಅದು ದೋಷಗಳನ್ನು ತೊಳೆದುಹಾಕುವಂತಹದೂ, ವಿಷಭೇದಕವೂ ವಾತರೋಗನಾಶ ಕವೂ ಆಗಿದೆಯೆಂದು ಹೇಳಲಾಗಿದೆ.

ಚುಂಬಕ ಬೇರೆ ಬೇರೆ ಆಕೃತಿಗಳಲ್ಲಿ ದೊರೆಯುತ್ತದೆ. ಚುಂಬಕದಿಂದ ಎತ್ತ ಲಾಗುವ ಭಾರವೇ ಅದರ 'ಶಕ್ತಿ' ಎನಿಸುತ್ತದೆ. ಪ್ರತಿಯೊಂದು ಚುಂಬಕದಲ್ಲೂ ಉತ್ತರಧ್ರುವ ಹಾಗೂ ದಕ್ಷಿಣಧ್ರುವ ಇರುತ್ತವೆ. ಉತ್ತರಧ್ರುವ ರೋಗನಾಶಕವಾಗಿ ದ್ದರೆ ದಕ್ಷಿಣಧ್ರುವ ಶಕ್ತಿವರ್ಧಕವಾಗಿದೆ. ಉತ್ತರಧ್ರುವವನ್ನು ೧೫–೨೦ ನಿಮಿಷ ಕಾಲ ದೇಹಕ್ಕೆ ತಗಲಿಸಿಬಿಟ್ಟರೆ ಗಾಯಗಳಿಂದ ಹೊರಡುವ ರಕ್ತಸ್ರಾವ ನಿಲ್ಲುತ್ತದೆ. ಮತ್ತು ಗಾಯಗಳು ಬಹುಬೇಗನೆ ತುಂಬಿಕೊಳ್ಳುತ್ತವೆ. ಗುಳ್ಳೆ, ಹುಣ್ಣು, ಬಾವು ಮೊದಲಾದ ಚರ್ಮರೋಗಗಳೂ, ಸಂದುನೋವುಗಳೂ ದಕ್ಷಿಣಧ್ರುವದ ಸ್ಪರ್ಶದಿಂದ ದೂರಾಗುತ್ತವೆ.

ಶರೀರದ ಸ್ಥಾನ ಹಾಗೂ ಬಳಸುವ ಅವಧಿಯನ್ನನುಸರಿಸಿ ಕಾಯಿಲೆಗಳನ್ನು ಗುಣಪಡಿಸಲಾಗುತ್ತದೆ. ಪರಿಣತ ಚಿಕಿತ್ಸಕರ ನೆರವಿನಿಂದ ಈ ಚಿಕಿತ್ಸೆ ನಡೆಸಬೇಕು. ಗರ್ಭಿಣಿ ಹಾಗೂ ಮಕ್ಕಳಿಗೆ ಶಕ್ತಿಶಾಲೀ ಚುಂಬಕಗಳಿಂದ ಚಿಕಿತ್ಸೆ ನಡೆಸಬಾರದು. ಚುಂಬಕಸ್ಪರ್ಶದ ಬಳಿಕ ಕನಿಷ್ಠ ಎರಡು ತಾಸುಗಳ ತನಕ ಸ್ನಾನ ಮಾಡುವುದಾ ಗಲೀ ತಂಪುಪಾನೀಯಗಳ ಸೇವನೆಯಾಗಲೀ ವರ್ಜ್ಯ.

ಬಾಹ್ಯಸ್ಪರ್ಶವಲ್ಲದೆ ಚುಂಬಕದಿಂದ 'ಚುಂಬಕೀಯ ಜಲ' ವನ್ನು ತಯಾರಿಸ ಲಾಗುತ್ತದೆ. ಶಕ್ತಿಶಾಲೀ ಚುಂಬಕದ ಮೇಲೆ ಕುದಿಸಿ, ತಣಿಸಿ ಗಾಜಿನ ಅಥವಾ ಸ್ಟೆನಲೆಸ್‌ಸ್ಟೀಲಿನ ಪಾತ್ರೆಯಲ್ಲಿ ೧೨ ರಿಂದ ೨೪ ತಾಸುಗಳ ತನಕ ಇರಿಸಿದ ನೀರೇ

ಚುಂಬಕೀಯ ಜಲ ಎನಿಸುತ್ತದೆ. ಕೆಲವರು ಉತ್ತರ ದಕ್ಷಿಣಧ್ರುವಗಳನ್ನು ಬೇರೆ ಬೇರೆ ಗ್ಲಾಸುಗಳಲ್ಲಿ ೧೨ ತಾಸುಗಳ ತನಕ ಮುಳುಗಿಸಿಟ್ಟು ಆ ನೀರನ್ನು ಬಳಿಕೆ ಯಾಗಿ ಬಾಟ್ಲಿಯಲ್ಲಿ ತುಂಬಿಡುತ್ತಾರೆ. ಈ ಚುಂಬಕೀಯ ಜಲವನ್ನು ದಿನಕ್ಕೆರಡು ಸಲ ಊಟದ ಬಳಿಕ ತೆಗೆದುಕೊಳ್ಳುತ್ತಾರೆ. ಇದರಿಂದ ಜೀರ್ಣಕ್ರಿಯೆಯ ಅಸ್ತವ್ಯಸ್ತತೆ ದೂರಾಗುತ್ತದೆ. ಆಮ್ಲಪಿತ್ತದ ಉಪದ್ರವ ಹಾಗೂ ಅನಿದ್ರಾರೋಗ ನಿವಾರಣೆ ಹೊಂದುತ್ತವೆ. ಈ ನೀರು ವಾತಕಫನಾಶಕವಷ್ಟೇ ಅಲ್ಲ.... ಹಾರ್ಮೋನ್‌ಗಳಿಗೂ ಸಹಾಯಕ. ಎಂತಲೇ ಬೊಜ್ಜಿನಿಂದ ಬಳಲುವವರು ಚುಂಬಕೀಯ ಜಲ ಸೇವಿಸಿ ಅದನ್ನು ಕರಗಿಸಿಕೊಳ್ಳಬಹುದು. ಆಗ ಅವರಲ್ಲಿ ನವಸ್ಫೂರ್ತಿ ಹಾಗೂ ಉತ್ಸಾಹ ತುಂಬಿ ಬರುವುದು. ಮಹಿಳೆಯರೂ ಈ ನೀರು ಕುಡಿದು ಗರ್ಭಾಶಯದ ವಿಕಾರಗಳನ್ನು ಹೋಗಲಾಡಿಸಿಕೊಳ್ಳಬಹುದು. ದಿನನಿತ್ಯದ ಕೆಮ್ಮು ನೆಗಡಿಗಳಿಂದ ಹಿಡಿದು ದೊಡ್ಡ ದೊಡ್ಡ ರಾಹಿಲೆಗಳವರೆಗೂ ಚುಂಬಕ ಚಿಕಿತ್ಸೆ ಪ್ರಭಾವಶಾಲಿ ಎನಿಸುತ್ತದೆ. ಆದ್ದರಿಂದ ಈ ಚಿಕಿತ್ಸಾ ಪದ್ಧತಿಯನ್ನು ನೀವೆಲ್ಲ ಪರೀಕ್ಷಿಸಿ ನೋಡಿರಿ.

[ಹಿಂದಿಯಿಂದ]

---

# ಅಕ್ಕಮಹಾದೇವಿಯ ವಚನಗಳು

## ಸಂಸಾರ ಹೇಯ

ಆಲಿಸೆನ್ನ ಬಿನ್ನಪವ. ಪಾಲಿಸೆನ್ನ ಬಿನ್ನಪವ. ಪಾಲಿಸೆನ್ನ ಬಿನ್ನಪವ. ಏಕೆನ್ನ ಮೊರೆಯ ನೋಡೆನ್ನ ದುಃಖ ಚನ್ನಮಲ್ಲಿಕಾರ್ಜುನಯ್ಯಾ?

ಬಲ್ಲಿದನ ಹಗೆಯ ತೆಗೆವನ್ನಬರ ಬಡವನ ಹರಣ ಹೋದ ತೆರನಂತಾಯಿತ್ತು. ನೀ ಕಾಡಿ ನೋಡುವನ್ನಬರ, ಎನಗಿದು ವಿಧಿಯೇ ಹೇಳಾ ತಂದೆ? ಮೂರುವಾರುವನ್ನಬರ, ಒಮ್ಮೆ ಗಾಳಿಗೆ ಹಾರಿ ಹೋದ ತೆರನಂತಾಯಿತ್ತು. ಎನಗೆ ನೀನಾವ ಪರಿಯಲ್ಲಿ ಕರುಣಿಸುವೆಯಯ್ಯ ಚನ್ನಮಲ್ಲಿಕಾರ್ಜುನಾ?

ಪುಣ್ಯ ಪಾಪಂಗಳನರಿಯದ ಮೊದಲು, ಅನೇಕ ಭವಂಗಳಲ್ಲಿ ಬಂದನಯ್ಯಾ! ನಂಬಿ ಶರಣುವೊಕ್ಕನಯ್ಯಾ! ನಿಮ್ಮನೆಂದೂ ಅಗಲದಂತೆ ಮಾಡಿ ನಡಿಸಯ್ಯಾ! ನಿಮ್ಮ ಧರ್ಮ, ನಿಮ್ಮ ಧರ್ಮ ನಿಮ್ಮನೊಂದನೇ ಬೇಡುವೆನು. ಎನ್ನ ಬಂಧನವ ಬಿಡುವಂತೆ ಮಾಡಯ್ಯಾ ಶ್ರೀಚನ್ನಮಲ್ಲಿಕಾರ್ಜುನಾ.

ಾರತ ಸರ್ಕಾರದ ವಾರ್ತಾ ಶಾಖೆ
ಂಗಳೂರು

## ಕಂಪ್ಯೂಟರ್ "ಓ ಕಂಪ್ಯೂಟರ್ ?"

ಭಾರತದಲ್ಲಿ ಕಂಪ್ಯೂಟರ್‌ಗಳ ಬಳಕೆ ದಿನದಿನಕ್ಕೂ ಹೆಚ್ಚುತ್ತಿದೆ. ಯೋಜನೆ, ುತ್ಪಾದನೆ, ಸಂವಹನ, ಮುಂತಾಗಿ ಹಲವು ಹತ್ತು ಕ್ಷೇತ್ರಗಳಲ್ಲಿ ಕಂಪ್ಯೂಟರ್‌ಗಳ ್ರವೇಶವಾಗುತ್ತಿದೆ. ಕಂಪ್ಯೂಟರ್ ಬಳಕೆಯಲ್ಲಿ ಒಂದು ಭಾರಿ ನೆಗೆತ ಕಂಡುಬರು ್ದೆ. ಕಂಪ್ಯೂಟರ್‌ಗಳೊಂದಿಗೆ ಕೆಲಸ ಮಾಡಬಲ್ಲ ಪರಿಣತರ ಅಗತ್ಯ ಬಹು ಮುಖ್ಯ ಾಗಿ ಕಾಣಬರುತ್ತಿದೆ. ಆದರೆ ಬೇಡಿಕೆಯಿದ್ದಷ್ಟು ಜನ ಪರಿಣತರು ಈ ಕ್ಷೇತ್ರದಲ್ಲಿ ನ್ನೂ ತಯಾರಾಗಿಲ್ಲ.

ಒಂದು ಅಂದಾಜಿನ ಪ್ರಕಾರ 1985-90 ರ ವೇಳೆಗೆ ಸುಮಾರು 450 .ಎಚ್‌ಡಿಗಳು, 12,000 ಎಂ ಟೆಕ್ ಮತ್ತು ಬಿ.ಟೆಕ್, 38000 ಡಿಪ್ಲೋಮಾ ದವೀಧರರು ಹಾಗೂ 30,000 ತರಬೇತಿ ಪಡೆದವರು ಬೇಕಾಗಬಹುದು. ಆದರೆ ಾಗಿರುವ ಕಂಪ್ಯೂಟರ್ ಕಾರ್ಯಕ್ರಮಗಳಿಂದಾಗಿ 60 ಪಿ ಎಚ್‌ಡಿಗಳು, 4400 ಎಂ. ೆಕ್ ಮತ್ತು ಬಿ. ಟೆಕ್‌ಗಳು ಸುಮಾರು 8000 ಡಿಪ್ಲೋಮಾದಾರರು ಹಾಗೂ 700 ತರಬೇತಿ ಪಡೆದವರು ಮಾತ್ರ ತಯಾರಾಗುತ್ತಿದ್ದಾರೆ.

ಬೇಡಿಕೆ ಮತ್ತು ಪೂರೈಕೆಗಳ ನಡುವಿನ ಅಂತರವನ್ನು ಕಡಿಮೆ ಮಾಡುವ ುದ್ದೇಶದಿಂದ ಏಳನೇ ಯೋಜನೆಯ ಅವಧಿಯಲ್ಲಿ ಕೇಂದ್ರ ವಿದ್ಯುನ್ಮಾನ ಇಲಾಖೆಯು, ಶ್ವವಿದ್ಯಾಲಯ ಧನ ಸಹಾಯ ಆಯೋಗ, ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿ ಾಲಯ ಹಾಗೂ ಉದ್ಯೋಗ ಮತ್ತು ತರಬೇತಿಯ ಮಹಾ ನಿರ್ದೇಶಕರ ಜಂಟಿ ಸಹ ೋಗದೊಂದಿಗೆ ಹಲವಾರು ಕಾರ್ಯಕ್ರಮಗಳನ್ನು ನಿರೂಪಿಸುತ್ತಿದೆ.

ಈ ಕಾರ್ಯಕ್ರಮಗಳಲ್ಲಿ ಹಲವು ಡಿಪ್ಲೋಮಾ ಮತ್ತು ಪದವಿ ತರಗತಿಗಳನ್ನು ಾರಂಭಿಸುವುದೂ ಸಹಾ ಒಂದು. ಯುಜಿಸಿಯ ಸಹಕಾರದೊಂದಿಗೆ ಒಂದು ವರ್ಷ ಅವಧಿಯ ಕಂಪ್ಯೂಟರ್ ಬಳಕೆಯ ಸ್ನಾತಕೋತ್ತರ ಡಿಪ್ಲೋಮಾ ತರಗತಿಗಳನ್ನು 32 ಶ್ವವಿದ್ಯಾಲಯಗಳಲ್ಲಿ ಆರಂಭವಾಗುತ್ತಿದೆ. ಪಾಲಿಟೆಕ್ನಿಕ್ ನಂತರದ ಒಂದೂವರೆ ವರ್ಷದ ಅವಧಿಯ ತರಗತಿಗಳನ್ನು 25 ಪಾಲಿಟೆಕ್ನಿಕ್‌ಗಳಲ್ಲಿ ಶುರುಮಾಡಲಾಗುತ್ತದೆ. ಪ್ರಸ್ತುತ 25 ಕೇಂದ್ರಗಳು ಕಂಪ್ಯೂಟರ್ ಬಿ.ಟೆಕ್ ಹಾಗೂ 12 ಕೇಂದ್ರಗಳು ಕಂಪ್ಯೂ ಟರ್ ಎಂ ಟೆಕ್ ತರಗತಿಗಳನ್ನು ನಡೆಸುತ್ತಿವೆ.

ಇದರೊಂದಿಗೆ ವಿದ್ಯಾಸ್ನಾನ ಇಲಾಖೆಯು ಹಲವು ಕಿರು ಅವಧಿಯ ಕಂಪ್ಯೂಟ
ತರಬೇತಿ ತರಗತಿಗಳನ್ನು ನಡೆಸಲು ಉದ್ದೇಶಿಸಿದೆ. ಅಲ್ಲದೆ, ಸೇವೆಯಲ್ಲಿರುವವ
ತರಬೇತಿ ಶಿಬಿರಗಳನ್ನು ಏರ್ಪಡಿಸಲು ಸಂಜೆ ತರಗತಿಗಳನ್ನು ನಡೆಸಲೂ ಸ
ಯೋಜಿಸಲಾಗಿದೆ.

ಯುವಜನರಲ್ಲಿ ಅಚ್ಚರಿ–ಆಸಕ್ತಿ–ಸಂಭ್ರಮ ಮೂಡಿಸುತ್ತಿರುವ ಈ ಉಪಕರ
ಅವರಲ್ಲಿ ಹುದುಗಿರುವ ಸುಪ್ತ ಪ್ರತಿಭೆ ಹೊರಹೊಮ್ಮಲು ಸಮರ್ಥವಾದ ಮಾಧ್ಯ
ವಾಗಿ ಬೆಳೆಯುತ್ತಿದೆ. ಅಲ್ಲದೆ, ನಾಡಿನ ಹಲವು ಪ್ರತಿಭಾವಂತ ಯುವಜನರ
ಉದ್ಯೋಗಾವಕಾಶಗಳನ್ನು ನಿರ್ಮಿಸುತ್ತಿದೆ ಅವರ ಹೆಮ್ಮೆಯ ಸಾಧನವಾ
'ಕಂಪ್ಯೂಟರ್ ನನ್ನ ಕಂಪ್ಯೂಟರ್' ಎಂದು ಆತ್ಮೀಯ ಗೆಳೆಯನಾಗುತ್ತಿದೆ (ಪಿಐಬ

## ಸ್ವಾವಲಂಬಿ :—

ಜೀವನವನ್ನು ಸುಗಮಗೊಳಿಸಿಕೊಳ್ಳಲು ಸರ್ಕಾರವನ್ನೇ ಆಧರಿಸಬೇಕಿಲ್ಲ
ಸರ್ಕಾರದ ಯೋಜನೆಗಳ ಸೌಲಭ್ಯವನ್ನು ಉಪಯೋಗಿಸಿಕೊಂಡರೆ ಸಾಕು. ಗು
ಮುಟ್ಟುವುದು ಸುಲಭ ಸಾಧ್ಯ. ಶಿವಮೊಗ್ಗದ ರತನ್ ಈ ದಿಶೆಯಲ್ಲೊಂದು ಅನು
ರಣೀಯ ಆದರ್ಶ ವ್ಯಕ್ತಿ.

ರತನ್, 1981 ರಲ್ಲಿ ಬಿ. ಕಾಂ. ಮುಗಿಸಿದ. ಸಾಮಾನ್ಯವಾಗಿ ಎಲ್ಲಾ ಪದ
ವೀದರರಂತೆ ಸ್ಥಳೀಯ ಉದ್ಯೋಗ ವಿನಿಮಯ ಕೇಂದ್ರದಲ್ಲಿ ತನ್ನ ಹೆಸರನ್ನು ದಾಖಲ
ಮಾಡಿದ. ಸರ್ಕಾರ ಅಥವಾ ಸಾರ್ವಜನಿಕ ಸಂಸ್ಥೆಗಳಲ್ಲಿ ಕೆಲಸಗಿಟ್ಟಿಸಿಕೊಳ್ಳಲು
ಪ್ರಯತ್ನಿಸಿದ. ತಾನು ಅಭ್ಯಾಸ ಮಾಡುವಾಗಲೂ ಗಡಿಯಾರ ರಿಪೇರಿ ಮಾಡುವ
ಹವ್ಯಾಸವಿದ್ದ ರತನ್ ಓದುತ್ತಿರುವಾಗಲೇ ಗಡಿಯಾರದ ಅಂಗಡಿಗಳಲ್ಲಿ ಕೊಂಚಕಾಲ
ದುಡಿದು 100 ರಿಂದ 150 ರೂ ಸಂಪಾದಿಸುತ್ತಿದ್ದ. ಈ ಹವ್ಯಾಸವೇ ಮುಂದೆ ಆತನ
ಸುಗಮ ಜೀವನಕ್ಕೆ ಕಾರಣವಾಯಿತು. ಅಕ್ಕಿ ಗಿರಣಿಯಲ್ಲಿ ಕೆಲಸ ಮಾಡುತ್ತಿದ್ದ
ತಂದೆಗೆ ನೆರವಾಗಬೇಕು, ಕುಟುಂಬಕ್ಕೆ ತನ್ನದೇ ಆದ ನೆರವು ದೊರಕಿಸಿಕೊಡಬೇ
ಕೆಂಬ ಉದ್ದೇಶದಿಂದ ಕೆಲಸಕ್ಕಾಗಿ ಅವಿಶ್ರಾಂತವಾಗಿ ಪ್ರಯತ್ನಿಸಿ ವಿಫಲನಾದ. ನಿರು
ದ್ಯೋಗದಿಂದ ಬೇಸತ್ತ ರತನ್ ಜಿಲ್ಲಾ ಕೈಗಾರಿಕಾ ಕೇಂದ್ರದ ಸ್ವಯಂ ಉದ್ಯೋಗಾ
ವಕಾಶ ಯೋಜನೆ ಕುರಿತು ಪ್ರಕಟಿಸಿದ್ದ ಜಾಹಿರಾತನ್ನು ನೋಡಿದ್ದ. ಸಂಬಂಧ
ಪಟ್ಟ ಅಧಿಕಾರಿಗಳನ್ನು ಸಂಪರ್ಕಿಸಿ ಗಡಿಯಾರ ರಿಪೇರಿಯಲ್ಲಿ ತನಗಿರುವ ಆಸಕ್ತಿ
ಯನ್ನು ವ್ಯಕ್ತಪಡಿಸಿದ. ಸ್ವಯಂ ಉದ್ಯೋಗಯೋಜನೆಗೆ ಸಂಬಂಧಪಟ್ಟ ಎಲ್ಲಾ
ನಿಯಮಗಳನ್ನು ಸರಿಯಾಗಿ ಅನುಸರಿಸಿದ. ಸ್ಥಳೀಯ ಮೈಸೂರು ಬ್ಯಾಂಕ್ ವತಿ
ಯಿಂದ 25,000 ರೂಗಳ ಸಾಲದ ನೆರವು ಪಡೆದ ಶಿವಮೊಗ್ಗದಲ್ಲಿ ತನ್ನದೇ ಆದ

ಸರಿನಲ್ಲಿ ಗಡಿಯಾರ ಮಾರಾಟ ಹಾಗೂ ರಿಪೇರಿ ಅಂಗಡಿಯನ್ನು ತೆರೆದ. ಬ್ಯಾಂಕ್ ನೆರವಿನಿಂದಾಗಿ ಅಗತ್ಯವಾದ ಯಂತ್ರೋಪಕರಣ ಹಾಗೂ ಇತರ ವಸ್ತುಗಳನ್ನು ಕೊಂಡ. ರತನ್‌ನ ದಿನಗಳೀಗ ಬಹಳಷ್ಟು ಏರಿದೆ. ಕುಟುಂಬದ ಎಲ್ಲರ, ತೃಪ್ತಿಕರ ಜೀವನಕ್ಕೆ ದಾರಿಯಾಗಿದೆ. ತನ್ನ ಸೋದರರನ್ನು ಈ ಉದ್ಯೋಗದಲ್ಲೇ ಮುಂದುವರಿಸಲು ಪ್ರೋತ್ಸಾಹಿಸುತ್ತಿದ್ದಾನೆ. ಶಿವಮೊಗ್ಗ ಮತ್ತು ಸುತ್ತ ಮುತ್ತಲ ಪ್ರದೇಶಗಳ ನಿರುದ್ಯೋಗಿ ಪದವಿಧರರು ಈತನ ಯಶಸ್ವಿ ಪ್ರಯತ್ನ ಮಾರ್ಗದರ್ಶನ ನೀಡುವಂತಿದೆ. ಬೇರೆ ಉದ್ಯೋಗ ದೊರೆತರೂ ಒಪ್ಪಿಕೊಳ್ಳಲು ರತನ್ ಈಗ ಸಿದ್ಧನಿಲ್ಲ.

## ಧ್ವನಿಸುವ ಬೆರಳುಗಳು

ತಮಿಳುನಾಡಿನ ರಾಮಲಿಂಗಂ ಹುಟ್ಟು ಕಿವುಡ. ಯಾವುದೇ ರೀತಿಯ ಧ್ವನಿಯನ್ನು ಆಲಿಸಲಾಗದಂತಹ ಅನಿವಾರ್ಯ ಬದುಕು. ಕೆಲಕಾಲ ಹೆತ್ತವರಿಗೆ ಏನು ಮಾಡಲು ತೋಚಲಿಲ್ಲ. ನಂತರ ಕಿವುಡರ ಶಾಲೆಗೆ ಸೇರಿಸಿದರು.

ಕಿವುಡರ ಶಾಲೆಯಲ್ಲಿದ್ದಾಗ ಆತ ಚಿತ್ರಿಸಿದ 'ಪ್ರಾಣಿ ದಯೆ' ಮತ್ತು 'ವನ್ಯ ಪ್ರಾಣಿ'. ಚಿತ್ರಗಳಿಗೆ ತಮಿಳುನಾಡು ಸರ್ಕಾರದ ಪ್ರಶಸ್ತಿ ಲಭಿಸಿತು ನಂತರ ಆತ ಮದ್ರಾಸ್ ಲಲಿತಕಲಾ ಕಾಲೇಜಿಗೆ ಸೇರಿದ. ಲಲಿತ ಕಲೆಯಲ್ಲಿ ಪದವಿ ಗಳಿಸಿದ ರಾಮಲಿಂಗಂ ಈಗ ಭಾರತೀಯ ಓವರ್‌ಸೀಸ್ ಬ್ಯಾಂಕಿನ ಮದ್ರಾಸ್ ಶಾಖೆಯಲ್ಲಿ ವಿನ್ಯಾಸಕಾರ. ಪ್ರತಿಭಾಶಾಲಿ ಅಂಗವಿಕಲ ಉದ್ಯೋಗಿಯೆಂದು ಪುರಸ್ಕಾರ ಪಡೆದಿದ್ದಾನೆ.

ಇಲ್ಲಿಯವರೆಗೆ ರಾಮಲಿಂಗಂ-ಮದ್ರಾಸ್, ಬೆಂಗಳೂರು, ಹೈದರಾಬಾದ್, ಚಂಡಿಗಢ ಮತ್ತು ನವದೆಹಲಿಯಲ್ಲಿ ನಡೆದ ಹಲವು ಕಲಾ ಪ್ರದರ್ಶನಗಳಲ್ಲಿ ಭಾಗವಹಿಸಿ ಪ್ರಶಸ್ತಿ ಗಳಿಸಿದ್ದಾನೆ ಅಷ್ಟೇ ಅಲ್ಲದೆ, ಅಮೇರಿಕಾ, ಕೆನಡಾ, ಫ್ರಾನ್ಸ್, ಇಂಗ್ಲೆಂಡ್, ಹಾಲೆಂಡ್, ಬೆಲ್ಜಿಯಂ ಮತ್ತು ಪಶ್ಚಿಮ ಜರ್ಮನಿಗಳಲ್ಲಿ ಈತನ ಕಲಾ ಪ್ರದರ್ಶನಗಳು ಕಳೆದ ವರ್ಷಗಳಲ್ಲಿ ಏರ್ಪಾಡಾಗಿದ್ದವು.

ಆತ ಧ್ವನಿಯನ್ನು ಗ್ರಹಿಸದಿದ್ದರೇನಂತೆ. ಆತನ ಬೆರಳುಗಳೇ ಧ್ವನಿಸುತ್ತವೆ. ಬದುಕಿನ ಸತ್ಯಗಳನ್ನು ಆ ಬೆರಳುಗಳು ಚಿತ್ರಕಲೆಯ ಮೂಲಕ ಬಣ್ಣದಲ್ಲಿ ಮೂಡಿಸುತ್ತವೆ.

## ಬಂಗಾಳಿ ತಾಂಬೂಲ

ತಾಂಬೂಲಕ್ಕೆ ಭಾರತೀಯ ಸಂಪ್ರದಾಯದಲ್ಲಿ ಮಹತ್ವದ ಸ್ಥಾನವಿದೆ. ವೀಳ್ಯದೆಲೆ, ಅಡಿಕೆಯ ಹೋಳುಗಳು, ಸ್ವಲ್ಪ ನಿಂಬೂ ಜೊತೆಗೆ ಮೆಣಸು ಮತ್ತು ಏಲಕ್ಕಿಯೊಂದಿಗೆ ಜಗಿದರೆ ಉತ್ಸಾಹ ಪುಟಿಯುತ್ತದೆ ಎಂಬುದು ತಾಂಬೂಲ ಮೆಲ್ಲುವವರ ಅಂಬೋಣ. ಇದರೊಂದಿಗೆ ವಿದೇಶೀಯರನಂತೆ ಹೊಗೆಸೊಪ್ಪು ಸಹಾ ಸೇರಿಕೊಂಡಿತು. ತಾಂಬೂಲಕ್ಕೆ ಉಪಯೋಗಿಸುವ ಇವೆಲ್ಲವನ್ನು ಸಂಸ್ಕರಿಸಬೇಕಾಗುತ್ತದೆ. ಆದರೆ ವೀಳೆಯದೆಲೆಗೆ ಯಾವ ಸಂಸ್ಕರಣವೂ ಬೇಕಿಲ್ಲ. ಆದಿಕಾಲದಿಂದ ಕವಿಗಳು ಮಧುರ ವಾಸನೆ ಬೀರುವ ವೀಳೆಯದೆಲೆಯ ತೋಟಗಳ ಕುರಿತು ಹಾಡಿದ್ದಾರೆ.

ದೇಶದಾದ್ಯಂತ ಸುಮಾರು 16 ಲಕ್ಷ ಕುಟುಂಬಗಳು ವೀಳೆಯದೆಲೆಯ ಕೃಷಿಯಲ್ಲಿ ತೊಡಗಿದ್ದಾರೆ. ವರ್ಷಕ್ಕೆ ಸುಮಾರು ರೂ 800 ಕೋಟಿ ಮೊತ್ತದ ವೀಳ್ಯದೆಲೆಗಳನ್ನು ಬೆಳೆಯಲಾಗುತ್ತದೆ. ಪಶ್ಚಿಮ ಬಂಗಾಳವೊಂದರಲ್ಲೇ 5 ಲಕ್ಷ ಜನರು ವೀಳೆಯದೆಲೆ ಕೃಷಿಯಿಂದ ತಮ್ಮ ಜೀವನ ನಡೆಸುತ್ತಾರೆ.

ವೀಳೆಯದೆಲೆ ಬಳ್ಳಿಯಿಂದ ಹೊರಬರುತ್ತದೆ. ಒಂದು ಬಿಘಾ ಭೂಮಿಗೆ ಈ ಬಳ್ಳಿ ನೆಡಲು ಸುಮಾರು ರೂ. 7000 ಬೇಕಾಗುತ್ತದೆ ಸಾಮಾನ್ಯವಾಗಿ ಮಾರ್ಚ್ ತಿಂಗಳಲ್ಲಿ ನೆಟ್ಟರೆ, ಜೂನ್ ನಂತರ ಎಲೆಗಳನ್ನು ಕೀಳಬಹುದು. ಪಶ್ಚಿಮ ಬಂಗಾಳದ ಮಿದ್ನಾಪುರ, ನಾದಿಯಾ, ಹೌರಾ, ಹೂಗ್ಲಿ ಮತ್ತು 24 ಪರಗಣ ಜಿಲ್ಲೆಗಳು ವೀಳೆಯದೆಲೆ ತೋಟಗಳಿಗೆ ಪ್ರಖ್ಯಾತಿ ಪಡೆದಿವೆ. ಅವುಗಳ ವಾರ್ಷಿಕ ಉತ್ಪಾದನೆ ಸುಮಾರು ರೂ. 500 ಕೋಟಿ.

ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯನ್ವಯ ವೀಳೆಯದೆಲೆ ಕೃಷಿಕರಿಗೆ ರಾಷ್ಟ್ರೀಕೃತ ಬ್ಯಾಂಕುಗಳಿಂದ ಆರ್ಥಿಕ ನೆರವು ದೊರಕಲಾರಂಭಿಸಿದೆ. ಹನ್ನೊಂದು ಪಂಚಾಯತ್ ಪ್ರದೇಶಗಳ 34 ಹಳ್ಳಿಗಳ ಕೃಷಿಕರು ಆರ್ಥಿಕ ನೆರವು ದೊರಕಲಾರಂಭಿಸಿದೆ. ಹನ್ನೊಂದು ಪಂಚಾಯತ್ ಪ್ರದೇಶಗಳ 34 ಹಳ್ಳಿಗಳ ಕೃಷಿಕರು ಆರ್ಥಿಕ ನೆರವನ್ನು ಪಡೆಯುತ್ತಿದ್ದಾರೆ.

---

ಪುರುಷನ ಮುಂದೆ ಮಾಯೆ ಸ್ತ್ರೀ ಎಂಬ ಅಭಿಮಾನವಾಗಿ ಕಾಡಿತ್ತು ನೋಡಾ! ಸ್ತ್ರೀಯ ಮುಂದೆ ಮಾಯೆ ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ! ಲೋಕವೆಂಬ ಮಾಯೆಗೆ ಶರಣ ಚಾರಿತ್ರ ಮರುಳಾಗಿ ತೋರುವುದು ನೋಡಾ! ಚನ್ನಮಲ್ಲಿಕಾರ್ಜುನನೊಲಿದ ಶರಣಂಗೆ ಮಾಯೆ ಇಲ್ಲ, ಮರಹಿಲ್ಲ, ಅಭಿಮಾನವೂ ಇಲ್ಲ.

—ಅಕ್ಕ ಮಹಾದೇವಿ

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

ಆತ್ಮೀಯ ಶರಣಬಂಧು,

ರಘುವನಹಳ್ಳಿಯಿಂದ ನಮ್ಮ ಪ್ರಯಾಣ ತುಮಕೂರು ತಾಲ್ಲೂಕು ಕುಂಕುಮನ ಹಳ್ಳಿಯ ಕಡೆಗೆ ಸಾಗಿತು. ಬಸವ ತತ್ವಗಳ ಪ್ರಸಾರಕ್ಕೆ ಕಾಲ ದೇಶಗಳ ಸೀಮೆಯಿಲ್ಲ ತಾನೆ? ಸರ್ವಕಾಲ, ಸರ್ವದೇಶಗಳಿಗೆ ಅವುಗಳ ಅಗತ್ಯವಿದೆಯೆಂದೇ ಪರಮ ಪೂಜ್ಯ ಶ್ರೀ ಶ್ರೀಗಳವರು ಬಸವ ಜಯಂತಿ ಮಹಾಮಣಿಹ ಕೈಗೊಂಡರು. ಕುಂಕುಮನಹಳ್ಳಿ ಬಂಧುಗಳು ಬಸವೇಶ್ವರ ದೇವಾಲಯ ಜೀರ್ಣೋದ್ಧಾರ ಸಂದರ್ಭದಲ್ಲಿ ಬಸವಣ್ಣನವರ ಜಯಂತಿಯನ್ನು ಆಚರಿಸಿದರು. ರಾಜ್ಯದ ಧಾರ್ಮಿಕ ದತ್ತಿ ಮತ್ತು ಮುಜರಾಯಿ ಇಲಾಖೆಯ ಆಯುಕ್ತರು, ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ತುಮಕೂರು ಜಿಲ್ಲಾ ಅಸಿಸ್ಟೆಂಟ್ ಕಮೀಷನರ್ ಶ್ರೀ ಪೆರುಮಾಳ್ ಮತ್ತು ತಾಲ್ಲೂಕು ತಹಶೀಲ್ದಾರ್ ರವರೂ ಸಮಾರಂಭದಲ್ಲಿ ಭಾಗಿಗಳಾಗಿದ್ದರು. ಪರಮ ಪೂಜ್ಯ ಶ್ರೀ ಶ್ರೀಗಳವರು ಅಧ್ಯಕ್ಷತೆ ವಹಿಸಿದ್ದರು.

"ಬಸವಣ್ಣ ಈ ನಾಡಿನ ಬಹು ದೊಡ್ಡ ಮಹಾನುಭಾವ. ದೀನ ದಲಿತರನ್ನೂ ಉದ್ಧಾರಮಾಡಿದ ಮಹಾಪುರುಷ. ಆ ಪುಣ್ಯ ಪುರುಷನ ಜೀವನಸ್ಮರಣೆಯೇ ಒಂದು ಭಾಗ್ಯ. ಬುದ್ಧನಾದನಂತರ, ಭರತಖಂಡ ಕಂಡ ಅಪೂರ್ವ ಸತ್ವಶೀಲ ಬಸವಣ್ಣ. ಜಗತ್ತು ಅಂಥವರ ಬರುವಿಕೆಯಿಂದ, ಇರುವಿಕೆಯಿಂದ ಅರ್ಥಪೂರ್ಣವಾಗುತ್ತದೆ. ನಮ್ಮ ನಿಮ್ಮೆಲ್ಲರ ಮಹಾಪುಣ್ಯ ಇಂದು ಸಿದ್ಧಗಂಗಾ ಮಹಾ ಸ್ವಾಮಿಗಳಾದ ಪರಮ ಪೂಜ್ಯ ಶ್ರೀ ಶ್ರೀ ಡಾ|| ಶಿವಕುಮಾರ ಸ್ವಾಮಿಗಳು ಅಭಿನವ ಬಸವಣ್ಣನವರಾಗಿ ನಡೆದಿದ್ದಾರೆ. ಅವರು ನಡೆಸಿಕೊಂಡು ಬರುತ್ತಿರುವ ಈ "ಗ್ರಾಮಾಂತರ ಬಸವ ಜಯಂತಿ" ಮಹತ್ವದ ಸಂದೇಶವನ್ನು ಸಾರುತ್ತಿದೆ–ಎಂದು ಶ್ರೀ ಭಾಸ್ಕರಾಚಾರ್ ಉಪನ್ಯಾಸ ಮಾಡಿದರು.

ಯಾರು ಜನಮನದಲ್ಲಿ ನೆಲೆನಿಂತು ಅವರ ಜೀವನಕ್ಕೊಂದು ಭರವಸೆ ಬೆಳಕು ನೀಡುತ್ತಾರೋ ಅವರು ಮಹಾನುಭಾವರು. ಅಂಥವರು ಬಸವಣ್ಣ ನಾಡಿನ ಮಣ್ಣಿನ ಮಕ್ಕಳ ಮುಗ್ಧ ಹೃದಯದಿಂದ ಹೊರಹೊಮ್ಮಿದ ಹಾಡುಗಳನ್ನು ಗಮನಿಸಿದಾಗ ಈ ಸತ್ಯ ಹೊಳೆಯುತ್ತದೆ. "ಬಸವಣ್ಣ ಎಲ್ಲ ಬಲ್ಲಿದನಾಗಿ", ಶಿವಭಕ್ತಂಗೆ ಕಿರಿಯನಾಗಿ,

ಬಾಳಿ ಬೆಳೆದವನಲ್ಲ ಜನಪದ ಹಾಡುಗಳಲ್ಲಿ ಸುಂದರವಾಗಿ ಅವನ ವ್ಯಕ್ತಿತ್ವ ಅರಳಿದೆ– ಎಂದು ಹೆಚ್. ವಿ. ವೀರಭದ್ರಯ್ಯನವರು ಉಪನ್ಯಾಸ ಮಾಡಿದರು.

"ಒಂದು ಜನಾಂಗಕ್ಕೆ, ಒಂದು ದೇಶಕ್ಕೆ, ಒಂದು ಕಾಲಕ್ಕೆ ಮೀಸಲಾದವರಲ್ಲ ಭಗವಾನ್ ಬಸವಣ್ಣನವರು ಅವರು ವಿಶ್ವಬಂಧು, ವಿಶ್ವಮಾನವ. ಅವರ ವಚನಗಳಲ್ಲಿ ಅವರ ವ್ಯಕ್ತಿತ್ವ ಅರಳಿರುವುದನ್ನು ಕಾಣಬಹುದು. ಪರಿಪೂರ್ಣ ವ್ಯಕ್ತಿತ್ವ, ಸಮಾಜ ರಚನೆಯೇ ಅವರ ಉದ್ದೇಶವಾಗಿತ್ತು. ಅದರಲ್ಲಿ ವ್ಯಕ್ತಿಯ ನಿರಹಂಕಾರಕ್ಕೆ ಪ್ರಥಮ ಪ್ರಾಶಸ್ತ್ಯ. 'ಲೋಕದ ಡೊಂಕು' ತಿದ್ದುವ ಮುನ್ನ ವ್ಯಕ್ತಿ ಪರಿಶುದ್ಧನಾಗಬೇಕು ಎಂಬುದವರ ಸಂಕಲ್ಪ. ಅದಕ್ಕಾಗಿ ಅವರು ಹಮ್ಮಿಕೊಂಡ ಯೋಜನೆ ಕಾಯಕ ಮತ್ತು ದಾಸೋಹ. ಕಾಯಕದಿಂದ ವೈಯಕ್ತಿಕ ಪರಿಶುದ್ಧತೆ, ಸಾಮೂಹಿಕ ಪರಿವರ್ತನೆ ಸಾಮಾಜಿಕ ಸುಧಾರಣೆ ಸಾಧ್ಯ. 'ದುಡ್ಡು ಸ್ಥಾವರ, ದುಡಿಮೆ ಜಂಗಮ' ಎಂಬ ನಂಬಿಕೆ ಅವರದು. ದಾಸೋಹ ಜೀವನದ ಅತ್ಯಂತ ಶ್ರೇಷ್ಠ ಲಕ್ಷಣ. ದಾಸೋಹದಲ್ಲಿ ಅಹಂಕಾರ ನಿರಸನವಾಗುತ್ತದೆ. ನಿರಹಂಕಾರ ನೆಲೆಗೊಳ್ಳುತ್ತದೆ. ಗಳಿಕೆ ಸದ್‌ಬಳಕೆ ಯಾಗಿ ವೃದ್ಧಿಸುತ್ತದೆ. ರಾಷ್ಟ್ರ ಜೀವನದ ಸಮೃದ್ಧಿಗೆ ಕಾಯಕ–ದಾಸೋಹಗಳೇ ತಾರಕ ಮಂತ್ರ"–ಎಂದು ಪರಮ ಪೂಜ್ಯ ಶ್ರೀ ಶ್ರೀಗಳವರು ಅನುಗ್ರಹ ಭಾಷಣ ಮಾಡಿದರು.

ರಾತ್ರಿ ಹತ್ತು ಘಂಟೆಗೆ ಜಗಜ್ಜ್ಯೋತಿ ಬಸವೇಶ್ವರ ನಾಟಕ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿ, ಶ್ರೀ ಸಿದ್ಧಗಂಗಾ ಅವರಿಂದ ಪ್ರದರ್ಶಿತವಾಯಿತು. ಹತ್ತುಸಾವಿರ ಮಂದಿ ಸ್ಥಳಾಭಾವವಿದ್ದರೂ ನಿಂತು ನಾಟಕ ನೋಡಿದರು. "ಅಯ್ಯೋ ನನ್ನಮ್ಮ ಏನಾಯ್ತು ನಿನಗೆ"–ಎಂದು ಕಲ್ಯಾಣಿಯ ದುಃಖದ ದೃಶ್ಯವನ್ನು ಕಂಡು ಒಬ್ಬ ಮುದುಕಿ ಅಳುತ್ತಿದ್ದುದನ್ನು ಕಂಡಾಗ ನಾಟಕ ಪರಿಣಾಮ ಏನೆಂದು ವರದಿಗಾರ ಕಂಡು ಕೊಂಡಿದ್ದು.

(ಮತ್ತೆ ಬರೆಯುತ್ತೇನೆ) ●

---

## ಮಹಾದೇವಿಯಕ್ಕನ ವಚನ

ಹರಿಯ ನುಂಗಿತ್ತು ಮಾಯೆ. ಅಜನ ನುಂಗಿತ್ತು ಮಾಯೆ. ಇಂದ್ರನ ನುಂಗಿತ್ತು ಮಾಯೆ. ಚಂದ್ರನ ನುಂಗಿತ್ತು ಮಾಯೆ. ಬಲ್ಲೆನೆಂಬ ಬಲುಗಯ್ಯರ ನುಂಗಿತ್ತು ಮಾಯೆ. ಅರಿಯೆನೆಂಬ ಅಜ್ಞಾನಿಗಳ ನುಂಗಿತ್ತು ಮಾಯೆ. ಈರೇಳು ಭುವನವನಾರಡಿಗೊಂಡಿತ್ತು ಮಾಯೆ. ಚನ್ನಮಲ್ಲಿಕಾರ್ಜುನಯ್ಯ ಎನ್ನ ಮಾಯೆಯ ಮಾಣಿಸಾ ಕರುಣಿ.

# " ಶಿವಶರಣರ ಜನನ "

—ಶಮಸುದ್ದೀನ ಹ. ಇಂಗಳಗಿ
ಸಾ॥ ಶಿವರಮಳ್ಳಿಹಳ್ಳಿ-581214 ಸವಣೂರ ತಾ॥ ಧಾರವಾಡ ಜಿಲ್ಲೆ.

ಹೂಳುವರು ಹುಟ್ಟುವರು
ಮತ್ತೊಮ್ಮೆ ಶಿವಶರಣರೂ
ಮೆಟ್ಟುವರು ಧರೆಯನು
ಕಟ್ಟುವರು ಮುಕ್ತಿ ಕೋಟೆಯನು
ದುರ್ಧರ ಮೆಟ್ಟುತ ಶಾಂತಿಯ ಸಾರುತ ॥ಪ॥

ಗಾಳಿ ಬೀಸುವದು ಜೊಳ್ಳು ಹಾರುವದು
ಹಾಲಾಹಲ ಹಾಲಾಗುವುದು
ಕಾಕ ಕುಹಕರು ಶೋಭಿಸುವರು
ಭ್ರಾತೃ ಪ್ರೇಮ ಬೆಳೆಯುತ
ಬಾಳಲತೆ ಚಿಗುರುತಾ ॥ಪ॥

ಗೋಮಾತೆ ಕಟುಕರಾ ಕಾಯಾಗಿ
ಭೀಮಾರತಿ ಹೊಳೆ ಹಾಲಾಗಿ
ಭೂಲೋಕ ಶಿವಲೋಕವಾಗಿ
ಶಿವಲೋಕ ಶಾಂತಿಯಾಗರವಾಗಿ
ಹರ, ಗುರು, ಶರಣರು, ಕರುಣಿಸಿ ॥ಪ॥

ಜಲವೆಲ್ಲ ಅಮೃತವಾಗಿ
ನಾದವೆಲ್ಲ ಓಂಕಾರವಾಗಿ
ಮುಳ್ಳು ಮಲ್ಲಿಗೆಯಾಗಿ
ಹಾವು ಹಾರವಾಗಿ
ಆ ಹಾರ ಶಿವಚರಣಕೆ ಸೇರಿ ॥ಪ॥

(42ನೇ ಪುಟದಿಂದ)

# ರಾಷ್ಟ್ರೀಯತೆಗೆ ಗಟ್ಟಿ ದನಿ ಕೊಟ್ಟ ಕವಿ ರವೀಂದ್ರರು

ಎಲ್ಲಿ ಮನಸ್ಸಿಗೆ ಭೀತಿಯ ಸೋಂಕು ಇಲ್ಲವೋ, ಎಲ್ಲಿ ಮಾನವ ತಲೆಯೆತ್ತಿ ನಡೆಯಬಲ್ಲನೋ, ಅಂತಹ ಸ್ವಾತಂತ್ರ್ಯದ ಸ್ವರ್ಗ ನಮ್ಮ ನಾಡಿನಲ್ಲಿ ಉದಯವಾಗಲಿ ಎಂದು ಹಾರೈಸಿದ ರವೀಂದ್ರನಾಥ ಠಾಕೂರರು ಭಾರತದ ಋಜುತ್ವವನ್ನು ಚಿರಂತನವಾಗಿ ಬೆಳಗಿದ ಮಹಾನ್ ಆತ್ಮ. ಅವರ 125ನೇ ಜನ್ಮದಿನವನ್ನು ಇದೇ ಮೇ ತಿಂಗಳ 9 ರಂದು ದೇಶದಾದ್ಯಂತ ವೈಭವದಿಂದ ಆಚರಿಸಲಾಯಿತು.

ಸುಮಾರು ನೂರು ವರ್ಷ ಕಾಲ ಭಾರತದ ಜನಮನವನ್ನು ಸೆರೆ ಹಿಡಿದು, ಭಾರತೀಯರ ಸಾಹಿತ್ಯಕ ಬದುಕನ್ನು ಹೊಸ ಎತ್ತರಕ್ಕೆ ಏರಿಸಿದ ಯುಗ ಕವಿ–ರವೀಂದ್ರನಾಥ ಠಾಕೂರರು. ಭಾರತದ ರಾಷ್ಟ್ರಗೀತೆಯನ್ನು ಬರೆದ ಈ ಕವಿ ನಮ್ಮ ರಾಷ್ಟ್ರೀಯ ಭಾವನೆಗಳಿಗೆ ಗಟ್ಟಿ ದನಿ ಕೊಟ್ಟವರು. ರವೀಂದ್ರರು ಇನ್ನೂ ಹದಿನಾಲ್ಕನೆಯ ವಯಸ್ಸಿನಲ್ಲಿರುವಾಗಲೇ ಅವರ ಕಾವ್ಯ ಪ್ರತಿಭೆಯಲ್ಲಿ ರಾಷ್ಟ್ರೀಯ ಚೇತನ ಪ್ರಕಟವಾಗಲು ತೊಡಗಿತ್ತು. ದೇಶದಲ್ಲಿ ಭೀಕರ ಬರಗಾಲ ತಾಂಡವವಾಡುತ್ತಿದ್ದಾಗ ದಿಲ್ಲಿಯಲ್ಲಿ ಲಾರ್ಡ್ ಲಿಟ್ಟನ್ ವೈಭವೋಪೇತ ದರ್ಬಾರು ನಡೆಸುತ್ತಿದ್ದ ಕಾಲ. ಈ ವಿಪರ್ಯಾಸವನ್ನು ಅರಿತುಕೊಂಡ ಎಳೆಯ ರವೀಂದ್ರರ ರಕ್ತ ಕುದಿಯುತ್ತಿತ್ತು. ತನ್ನ ಭಾವನೆಗಳನ್ನು ಕವಿತೆಯ ರೂಪದಲ್ಲಿ ಬರೆದು ಕಲ್ಕತ್ತಾದ ಹಿಂದೂ ಮೇಳದಲ್ಲಿ ಕಿಕ್ಕಿರಿದ ಜನಸಮೂಹದ ಮುಂದೆ ಅದನ್ನು ಹಾಡಿದರು.

1890ರ ದಶಕದಲ್ಲಿ ರವೀಂದ್ರರು 30ರ ಹರೆಯದಲ್ಲಿರುವಾಗ ಅವರ ರಾಷ್ಟ್ರೀಯ ವಿಚಾರಧಾರೆ ಸ್ಫುಟಗೊಂಡಿತು. ಹಿಂದೂಗಳು ಮತ್ತು ಮುಸಲ್ಮಾನರು ಒಗ್ಗಟ್ಟಾಗಿ ಬಾಳಬೇಕಾದುದು ಅತೀ ಅಗತ್ಯ ಎಂಬುದಾಗಿ ಅವರು ಬರೆದರು. ಆಂಗ್ಲೇಯರ ಅತಿ ದೊಡ್ಡ ಭಯ ಎಂದರೆ ಹಿಂದೂ–ಮುಸ್ಲಿಂ ಮೈತ್ರಿ, ಎಂದೂ ಅವರು ಅಭಿಪ್ರಾಯಪಟ್ಟರು.

ಇದೇ ಅವಧಿಯಲ್ಲಿ ಕಲ್ಕತ್ತಾದಲ್ಲಿ ಸ್ವದೇಶಿ ಅಂಗಡಿಯೊಂದನ್ನು ಆರಂಭಿಸುವ ಸಾಹಸಕ್ಕೆ ಅವರು ಇಳಿದರು. ಸ್ವಾವಲಂಬನೆಯೊಂದೇ ಭಾರತೀಯರ ವಿಮೋಚನೆಗೆ ದಾರಿ ಎಂದು ಅವರು ಬಲವಾಗಿ ನಂಬಿದ್ದರು. ಅವರ ವ್ಯಾಪಾರದ ಪ್ರಯೋಗ ಮಾತ್ರ ಯಶಸ್ವಿಯಾಗಲಿಲ್ಲ.

18 7ರಲ್ಲಿ ಬಂಗಾಳದ ಪ್ರಾಂತೀಯ ಸಮ್ಮೇಳನದಲ್ಲಿ ಇಂಗ್ಲೀಷಿನ ಬದಲಿಗೆ ಮಾತೃಭಾಷೆಯನ್ನು ಬಳಸಬೇಕೆಂಬ ವಾದ ಮಂಡಿಸಿದರು. ಮುಂದಿನ ವರ್ಷ ರಾಜದ್ರೋಹದ ಕಾಯಿದೆಯನ್ನು ಆಂಗ್ಲ ಪ್ರಭುತ್ವವು ಮಂಜೂರು ಮಾಡಿದಾಗ ರವೀಂದ್ರರು ಕಲ್ಕತ್ತಾದ ಪುರಭವನದಲ್ಲಿ ನಡೆದ ದೊಡ್ಡ ಸಭೆಯೊಂದರಲ್ಲಿ ಈ ರಾಕ್ಷಸ

ಕಾಯಿದೆಯ ವಿರುದ್ಧ ಗುಡುಗಿದರು. ಸುಮಾರು ಇದೇ ಹೊತ್ತಿಗೆ ಲೋಕಮಾ ತಿಲಕರನ್ನು ಬಂಧಿಸಲಾಯಿತು. ರವೀಂದ್ರರು ತಿಲಕರ ಬಿಡುಗಡೆಯ ಸಲುವಾಗಿ ಸಂಗ್ರಹಮಾಡಲು ತೊಡಗಿದರು. ಕಲ್ಕತ್ತಾದಲ್ಲಿ ಮಹಾಮಾರಿ ರೋಗ ಎರಗಿ, ಸಾ ರಾರು ಜನ ನರಳುತ್ತಿದ್ದ ಹೊತ್ತಿನಲ್ಲಿ ರವೀಂದ್ರರು ಭಗಿನಿ ನಿವೇದಿತಾ ಅವರ ಬಲ ಬಂಟನಾಗಿ ನಿಂತು ಪರಿಹಾರ ಕಾರ್ಯಗಳಿಗೆ ನೆರವಾದರು.

ಮುಂದೆ ಭಾರತದ ರಕ್ಷಣಾ ಕಾಯಿದೆಯ ಅನ್ವಯ ಬ್ರಿಟಿಷರ ದಬ್ಬಾಳಿಕೆ ವಿ ಮೀರಿದಾಗ ರವೀಂದ್ರರು ಸಿಡಿದೆದ್ದರು. ರಾಜಕೀಯ ಅನ್ಯಾಯದ ವಿರುದ್ಧ ಲೇಖ ಗಳನ್ನು ಬರೆದರು. ಇವುಗಳಲ್ಲಿ ಗಮನಾರ್ಹವಾದುದು 'ಗಿಳಿಯ ತರಬೇತಿ' ಎಂ ಅಣಕ ಲೇಖನ.

ರೌಲಟ್ ಮಸೂದೆ ಮಂಜೂರಾದ ಕರಾಳ ದಿನಗಳಲ್ಲಿ ಗಾಂಧೀಜಿಯವ ಸತ್ಯಾಗ್ರಹ ಚಳವಳಿಯನ್ನು ಸಂಘಟಿಸುತ್ತಿದ್ದ ಕಾಲ. ಇಂತಹ ವೇಳೆಯಲ್ಲಿ ಪರಿ ಹದ ಮೀರಬಹುದೆನ್ನುವ ಭೀತಿ ರವೀಂದ್ರರನ್ನು ಕಾಡುತ್ತಿತ್ತು. ಹಾಗೆ ಯೋಚಿಸ ತ್ತಿರುವಾಗಲೇ ಜಾಲಿಯನ್ ವಾಲಾಬಾಗಿನಲ್ಲಿ ಘೋರ ಹತ್ಯಾಕಾಂಡ ನಡೆಯಿತು ಈ ನರಹತ್ಯೆಯ ಸುದ್ದಿ ಬಂಗಾಳವನ್ನು ತಲುಪಲು ಒಂದು ತಿಂಗಳ ಕಾಲ ಬೇಕಾಯಿತು ರವೀಂದ್ರರಿಗೆ ಪಂಜಾಬಿಗೆ ಹೋಗುವ ಆತುರ. ಆದರೆ ಹೊರಡಲಾಗಲಿಲ್ಲ. ಪ್ರ ಭಟನಾರ್ಥವಾಗಿ ಸಭೆ ಕರೆಯಲು ಪ್ರಯತ್ನಿಸಿದರು. ಅದೂ ನಿಷ್ಫಲವಾಯಿತು ಇಂತಹ ಹೊತ್ತಿನಲ್ಲಿ ಲಾರ್ಡ್ ಚೆಮ್ಸ್‌ಫರ್ಡ್ ಅವರಿಗೊಂದು ಪತ್ರ ಬರೆದು ತಮ 'ಸರ್' ಪದವಿಯನ್ನು ತ್ಯಜಿಸಿದರು.

ರಾಷ್ಟ್ರೀಯತೆಯ ಕಲ್ಪನೆಯನ್ನು ಶಾಂತಿನಿಕೇತನ ವಿದ್ಯಾ ಮಂದಿರದಲ್ಲಿ ಸಾಕಾ ಗೊಳಿಸಿದ ರವೀಂದ್ರರು ವಿಶ್ವ ಮಾನವನಾಗಿ ಬಾಳಿದ್ದು ಒಂದು ವೈಶಿಷ್ಟ್ಯ. ಗ್ರಾಮ ಭಾರತವೇ ನಿಜವಾದ ಭಾರತವೆಂದು ಗಾಂಧೀಜಿಯವರು ನಂಬಿದಂತೆ ರವೀಂದ್ರರೂ ನಂಬಿದ್ದರು. ಸಹಕಾರಿ ಪದ್ಧತಿ ಹಾಗೂ ಸಾಮೂಹಿಕ ಪ್ರಯತ್ನಗಳಲ್ಲೂ ಅವರಿ ಅಪಾರ ನಂಬಿಕೆ. ಶಾಂತಿ ನಿಕೇತನದಲ್ಲಿಯೂ ಮಕ್ಕಳು ಸಂತೋಷವಾಗಿರಬೇಕು, ಸ್ವತಂತ್ರರಾಗಿರಬೇಕು ಎಂದು ಅವರು ಬಯಸಿದ್ದರು. ಓದು ಬರಹ ಜೀವನಕ್ಕೆ ಶಾ ಹೊಂದುವಂತಿರಬೇಕು ಎಂದೂ ಅವರ ಬಯಕೆಯಾಗಿತ್ತು. ಇದೇ ಉದ್ದೇಶದಿಂದ ವಿಶ್ವಭಾರತಿ ವಿಶ್ವವಿದ್ಯಾಲಯವನ್ನು ಅವರು ಸ್ಥಾಪಿಸಿದರು. ಪೂರ್ವ ಮತ್ತು ಪಶ್ಚಿಮ ಸಂಸ್ಕೃತಿಗಳ ನಡುವೆ ಜೀವಂತ ಸಂಬಂಧ ನೆಲೆಗೊಳಿಸುವುದು ಅವರ ಉದ್ದೇಶಗಳಲ್ಲಿ ಒಂದಾಗಿತ್ತು. ಸಂಸ್ಕೃತಿಯ ಸಮ್ಯಕ್‌ರೂಪವನ್ನು ಜೀವನದಲ್ಲಿ ಕಾಣುವುದು ಅವರ ಪರಮ ಧ್ಯೇಯವಾಗಿತ್ತು.

ಕಾಯಕದಲ್ಲಿ ಕೈಲಾಸವಿದೆ ಎಂದು ಬಲವಾಗಿ ನಂಬಿದ್ದ ರವೀಂದ್ರರು 'ರೈತನ ಉಳುಮೆಯಲ್ಲಿ, ಕಲ್ಲಿನ ಕೆಲಸ ಮಾಡುವಾತನ ದುಡಿಮೆಯಲ್ಲಿ ದೇವರನ್ನು ಕಾಣು' ಎಂದಿದ್ದಾರೆ. (50ನೇ ಪುಟ ನೋಡಿ)

# ಮುಪ್ಪು

ಕೆ. ಎಸ್. ಸ್ವಾಮಿ, ಎ: ಎ. ಬಿ. ಎಡ್.
ಅಧ್ಯಾಪಕರು, ಸರ್ಕಾರಿ ಬಾಲಕ ಪ್ರೌಢಶಾಲೆ, ಧಾವಣಗೆರೆ.

ಶರೀರ ಹಣ್ಣಾದುದರ ಹೆಗ್ಗುರುತು ಮುಪ್ಪು. ಬಾಲ್ಯ ಯೌವನದ ನಂತರದ ಸೋಪಾನವೇ ಮುಪ್ಪು ಬದುಕಿನ ಕಟ್ಟಕಡೆಯ ಹಂತ. ನೋವು ನಲಿವುಗಳ ಸಂಗಮದಲ್ಲಿ ಮೀಯುತ್ತಿರುವಾಗಲೇ ಓಡೋಡಿ ಬರುವುದು ಮುಪ್ಪು. ಲೌಕಿಕ ವ್ಯವಹಾರದಲ್ಲಿ ಹಗಲು ರಾತ್ರಿಗಳನ್ನು ದಾಟುತ್ತಿರುವಾಗಲೇ ಮುಪ್ಪು ಅಪ್ಪಿಕೊಳ್ಳಲು ಬರುವುದು. ನಾವು ಮುಪ್ಪು ಬೇಡವೆಂದರೂ ಅದು ಬಿಡುವುದೇ ? ಬಾಳ ನಾಟಕದ ಕೊನೆಯ ಭಾಗವೇ ಇದು.

ಶರೀರವು ಮುಪ್ಪಿನಿಂದ ಒಪ್ಪವಳಿಯದ ಮುನ್ನ, ಅನ್ಯರಿಗೆ ಹಂಗಾಗದ ಮುನ್ನ ಪೂಜಿಸಿ ಸಂಗಮದೇವನನ್ನು ಎನ್ನುತ್ತಾರೆ ಬಸವೇಶ್ವರರು. ಮುಪ್ಪಿನಲ್ಲಿ ಉಪ್ಪು ತಿನ್ನುವುದನ್ನು ಕಡಿಮೆ ಮಾಡಿ ಎನ್ನುತ್ತಾರೆ. ಹುಲಿಯಂತೆ ಮೆರೆದವರು ಇಲಿಯಂತೆ ವ್ಯವಹರಿಸ ಬೇಕಾಗುತ್ತದೆ ಮುಪ್ಪಿನಲ್ಲಿ ಮಹದೇವನನ್ನು ಪೂಜಿಸುವವರೇ ಹೆಚ್ಚು.

ನರೆ ಮುಪ್ಪು : ತಲೆಯ ಕಪ್ಪು ಕೂದಲು ಬೆಳ್ಳಿಯ ಬೆಟ್ಟದಂತಾಗುತ್ತದೆ. ಕಪ್ಪು ಕೂದಲಿನ ಮಧ್ಯ ಅಲ್ಲೊಂದು ಇಲ್ಲೊಂದು ನರೆಕೂದಲು ಕಂಡರೆ ವೈ ಝುಂ ಎನ್ನುತ್ತದೆ. ಮನ ನಡುಗುತ್ತದೆ ನರೆ ಕೂದಲನ್ನು ಕಿತ್ತರೆ ಒಂದಕ್ಕೆ ಹತ್ತಾಗಿ ಪರಿವರ್ತಿತವಾಗುತ್ತವೆ. ತಾರುಣ್ಯ ಮುಗಿಯುತ್ತಿದೆ ಎಂಬುದರ ಸಂಕೇತ ನರೆ ಕೂದಲು.

ಮುಪ್ಪು ಮಿಡುಕಾಟ : ಮುಪ್ಪು ಆವರಿಸಿದಂತೆಲ್ಲಾ ಸಾವಿನ ಚಿಂತೆ ಕಾಡುತ್ತದೆ. ಕೂತರೂ ನಿಂತರೂ ಯಮನ ದರ್ಶನ. ಮಾಡಿದ ಪಾಪಗಳ ಸುರಳಿ ಕಣ್ಣು ಮುಂದೆ ಬಿಚ್ಚುತ್ತದೆ. ತನ್ನ ದುರಾಚಾರಗಳೇ ತನ್ನ ನೆರಳಾಗಿ ಹಿಂಬಾಲಿಸುತ್ತದೆ. ಕ್ಷಣ ಕ್ಷಣಕ್ಕೂ ತಳಮಳ ಕಳವಳ ಆವರಿಸುತ್ತ. ಯಾರಿಗೂ ಹೇಳೋಣ ಬ್ಯಾಡ ಎಂದು ಮನಸ್ಸು ಹೇಳಿದರೂ ಬಾಯಿ ಸುಮ್ಮನಿರಬೇಕಲ್ಲ. ತಾವು ಮಾಡಿದ ಅನ್ಯಾಯ, ಅನಾಚಾರಗಳನ್ನು ಗುರುಗಳ ಮುಂದೆ, ಆತ್ಮೀಯರ ಮುಂದೆ, ಮನದ ತಳಮಳ ತಾಳಲಾರದೆ ಹೇಳುತ್ತಾರೆ ದೇವರಲ್ಲಿ ಕ್ಷಮೆ ಬೇಡುತ್ತಾರೆ. ಜೀವನದ ಕೊನೆಯ ಘಟ್ಟದಲ್ಲಿ ಪಾಪ ಪುಣ್ಯಗಳ ಅರಿವಾಗುತ್ತದೆ. ಆದರೆ ಕಾಲ ಮೀರಿರುತ್ತದೆ.

ಮುಪ್ಪು ಮಾಗಿ : ಮುಪ್ಪು ಉರಿವ ಬೇಸಿಗೆಯೂ ಅಲ್ಲಾ, ಸುರಿವ ಮಳೆಗಾಲವೂ ಅಲ್ಲಾ ಮುಪ್ಪು ಮಾಗಿಕಾಲ ಮಾಘ ಮಾಸದ ಚಳಿ ನೈನಡುಕ ಕೈನಡುಕ.

ಶರೀರದ ರಕ್ತ ಹೆಪ್ಪುಗಟ್ಟುವ ಕಾಲ. ಮಾಗಿಯಲ್ಲಿ ಹಣ್ಣೆಲೆ ಉದುರುತ್ತವೆ. ಬದು
ವಿನ ಅಂತ್ಯದ ಸಮಯ. ಅಂತಯೇ ಮುಪ್ಪಾದ ವ್ಯಕ್ತಿ ಮಾಗಿಯತ್ತ ಸಾಗು
ರುತ್ತಾನೆ.

**ಮುಪ್ಪಿಗುಸಿರೆಳೆದಾಟ :** ತಾರುಣ್ಯದಲ್ಲಿ ಹೃದಯದ ಬಡಿತದ ಧೀಮಂತ
ಶ್ರೀಮಂತಿಕೆ ಮುಪ್ಪಿನಲ್ಲಿ ತನ್ನ ತನವನ್ನು ಕಳೆದುಕೊಳ್ಳುತ್ತದೆ. ಉಸಿರನ್ನು ಎ
ದೆಳೆದು ಬಿಡುತ್ತಾನೆ. ಕೂತರೂ, ನಿಂತರೂ, ಚಲಿಸಿದರೂ ಆಯಾಸ. ಅತ್ಯಂ
ಪ್ರಯಾಸದ ಉಸಿರಾಟ ಪ್ರಾರಂಭವಾಗುತ್ತದೆ.

**ಮುಪ್ಪೆ ಸಡೆ ನಡೆ ಒಲ್ಲೆ :** ಮುಪ್ಪು ಒಲ್ಲೆನೆಂದರೂ ಬಿಡದು. ಮುಂದೆ ಹೋಗ
ನನ್ನ ಬಳಿ ಬರಬೇಡ ಎಂದರೂ ಕೇಳದು. ವ್ಯಕ್ತಿಗೆ ಒಂದಲ್ಲ ಒಂದು ದಿನ ಮುಪ್ಪಿ
ಸ್ವಾಗತ ಇದ್ದೇ ಇರುತ್ತದೆ ವ್ಯಕ್ತಿ ಮುಪ್ಪು ಕಂಡು, ಅನುಭವಿಸುತ್ತಾ ಪೆಚ್ಚಾಗ
ತ್ತಾನೆ. ಹುಚ್ಚಾಗುತ್ತಾನೆ. ತಾನು ಗಳಿಸಿದನ್ನು ಉಳಿಸಿದ್ದನ್ನು ಬಿಟ್ಟು ಹೋಗಲಿ
ಬೇಕಾದ ಕಾಲ ಸನಿಹವಾಗುತ್ತಿರುವುದನ್ನು ಕಂಡು ತತ್ತರಿಸುತ್ತಾನೆ

ಮುಪ್ಪಾದ ವ್ಯಕ್ತಿಗೆ ಬೆಲೆ ಸೊಪ್ಪಿಗಿಂತ ಕಡಿಮೆ ಉಪ್ಪಿಗಿಂತ ಕಡಿಮೆ ಇವ
ಸ್ಥಿತಿಗತಿ ಹಲ್ಲು ಕಿತ್ತ ಹಾವಿನಂತಾಗಿರುತ್ತದೆ. ತನ್ನ ಅಧಿಕಾರ ಅಹಂಕಾರ ದೂರಾ
ಸಮಯ-ದಲ್ಲಿ ವ್ಯಕ್ತಿ ಚೊಕ್ಕ ಬಂಗಾರವಾಗುತ್ತಾನೆ. ಆದರೆ ಈ ಬಂಗಾರ ಸವೆ
ನಾಣ್ಯದಂತೆ ಮೌಲ್ಯರಹಿತವಾಗಿರುತ್ತದೆ. ಮುಪ್ಪಾದವನಿಗೆ ಸತ್ಯದ ಅರಿವು ಧರ್ಮ
ತಿಳಿವು ಈಗುಂಟಾಗುತ್ತದೆ. ವೃದ್ಧನಾರಿ ಪತಿವ್ರತೆ ಎಂಬಂತೆ.

**ಮುಪ್ಪು ನಿತ್ಯ ಸತ್ಯ :** ಹಗಲಿನ ನಂತರ ರಾತ್ರಿ ಬರುವುದು ಎಷ್ಟು ಸತ್ಯವೋ
ಯೌವನದ ನಂತರ ಮುಪ್ಪು ಆವರಿಸುವುದು ಅಷ್ಟೇ ಸತ್ಯ. ಈ ಅರಿವಿನಿಂದ ಮಾ
ವರ ಬದುಕು ಸಾಗಬೇಕು. ಭವಿಷ್ಯದ ಅರಿವು ಇದ್ದರೆ ವ್ಯಕ್ತಿಗೆ ನಿರಂತರ ಬದುಕ
ಶಾಶ್ವತ ಸುಖದಾಯಕವಾಗುತ್ತದೆ. ತಾತ್ಕಾಲಿಕ ಸುಖ, ಸಂತಸ, ಅಧಿಕಾರ, ಅಂ
ಸ್ತಿಗೆ ವ್ಯಕ್ತಿ ತಾರುಣ್ಯದಲ್ಲಿ ವಶನಾದರೆ ಭವಿಷ್ಯದ ಬಾಳುಗೋಳಾಗುತ್ತದೆ, ಶೂನ
ವಾಗುತ್ತದೆ ಜೀವನದಲ್ಲಿ ಅಮೃತಫಲ ದೊರೆಯಬೇಕಾದರೆ ತನ್ನನ್ನು ಪರರಂ
ತಿಳಿಯುತ್ತಾ, ಪರೋಪಕಾರಿಯಾಗಿ ಬಾಳುವುದೊಂದೇ ದಾರಿ.

(ಬಿ. ಎಂ ಶ್ರೀಯವರ ಮುಪ್ಪು ಯೌವನ ಕವಿತೆಯ ಆಧಾರ)

---

ಕವಿ ರವೀಂದ್ರರು– (48ನೇ ಪುಟದಿಂದ

ಎಲ್ಲಿ ಮನಸ್ಸಿಗೆ ಭೀತಿಯ ಸೋಂಕು ಇಲ್ಲವೋ, ಎಲ್ಲಿ ಮಾನವ ತಲೆಯೆತ್ತಿ ನ
ಯಲು ಬಲ್ಲನೋ, ಅಂತಹ ಸ್ವಾತಂತ್ರ್ಯದ ಸ್ವರ್ಗ ನಮ್ಮ ನಾಡಿನಲ್ಲಿ ಉದಯವಾಗಲ
ಎಂದು ಹಾರೈಸಿದ ರವೀಂದ್ರರು ಭಾರತದ ಖ್ಯಾತಿಯನ್ನು ಪ್ರತಿಭೆಯನ್ನು ಚಿರಂತ
ವಾಗಿ ಬೆಳಗಿದ ಮಹಾನ್ ಆತ್ಮ. (ಪಿಐಬಿ)

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾಕ್ಷೇತ್ರ.